| Sl. No. | Public Authority | Public Information Officer, (Right to Information Act 2005 Section 5(1) | Asst. Public Information Officer, (Right to Information Act 2005 Section 5(2) | First Appelate Authority (Right to Information Act 2005 19(1) |
|---|---|---|---|---|
| 16. | Director, Medical Education, Anand Rao Circle, Bengaluru-560009 | CAO, Kidwai Memorial Institute of Oncology, Bengaluru | AO, Kidwai Memorial Institute of Oncology, Bengaluru | Director, Kidwai Memorial Institute of Oncology, Bengaluru |
| 17. | Director, Medical Education, Anand Rao Circle, Bengaluru-560009 | CAO, Indira Gandhi Insititute of Child Health, Bengaluru | AO, Indira Gandhi Insititute of Child Health, Bengaluru | Director, Indira Gandhi Insititute of Child Health, Bengaluru |
| 18. | Director, Medical Education, Anand Rao Circle, Bengaluru-560009 | CAO, Bengaluru Medical College and Research Institute, Bengaluru | AO, Bengaluru Medical College and Research Institute, Bengaluru | Director, Bengaluru Medical College and Research Institute, Bengaluru |
| 19. | Director, Medical Education, Anand Rao Circle, Bengaluru-560009 | CAO, Mysuru Medical College and Research Institute, Mysuru | AO, Mysuru Medical College and Research Institute, Mysuru | Director, Mysuru Medical College and Research Institute, Mysuru |
| 20. | Director, Medical Education, Anand Rao Circle, Bengaluru-560009 | CAO, Government Dental College & Research Institute, Bengaluru | AO, Government Dental College & Research Institute, Bengaluru | Director, Government Dental College & Research Institute, Bengaluru |
| 21. | Director, Medical Education, Anand Rao Circle, Bengaluru-560009 | CAO, Government Dental College & Research Institute, Ballari | AO, Government Dental College & Research Institute, Ballari | Director, Government Dental College & Research Institute, Ballari |
| 22. | Director, Medical Education, Anand Rao Circle, Bengaluru-560009 | CAO, SDS Tuberculosis & Rajiv Institute of Chest Diseases, Bengaluru | AO, SDS Tuberculosis & Rajiv Institute of Chest Diseases, Bengaluru | Director, SDS Tuberculosis & Rajiv Institute of Chest Diseases, Bengaluru |
| 23. | Director, Medical Education, Anand Rao Circle, Bengaluru-560009 | CAO, Institute of Nephro Urology, Bengaluru | AO, Institute of Nephro Urology, Bengaluru | Director, Institute of Nephro Urology, Bengaluru |
| 24. | Director, Medical Education, Anand Rao Circle, Bengaluru-560009 | CAO, Karnataka Institute of Diabetology, Bengaluru | AO, Karnataka Institute of Diabetology, Bengaluru | Director, Karnataka Institute of Diabetology, Bengaluru |
| 25. | Director, Medical Education, Anand Rao Circle, Bengaluru-560009 | CAO, Dharwad Institute of Mental Health & Neuro Sciences, Dharwad | AO, Dharwad Institute of Mental Health & Neuro Sciences, Dharwad | Director, Dharwad Institute of Mental Health & Neuro Sciences, Dharwad |

XVII) Such other information as may be prescribed ; and thereafter update the publications every year.

**P.R. 274**

By Order and in the name of the Governor of Karnataka

**A.S. Gowramma**

Under Secretary to Government

Health and Family Welfare Department. (Medical Education)

## ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಯುಸೇಇ 43 ಸಮನ 2016, ಬೆಂಗಳೂರು, ದಿನಾಂಕ: 03–03–2016.**

**ವಿಷಯ :** ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ–4(1)(ಬಿ) ಪ್ರಕಾರ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಮಾಹಿತಿ ಕೈಪಿಡಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** ಅಧಿಸೂಚನೆ ಸಂಖ್ಯೆ: ಯುಸೇಇ 129 ಸಮನ 2011, ದಿನಾಂಕ 25.02.2012.

ಉಲ್ಲೇಖಿತ ಅಧಿಸೂಚನೆಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005ರ 4(1)(ಬಿ) ಪ್ರಕಾರ ಪ್ರಕಟಿಸಲಾಗಿದ್ದ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಕೈಪಿಡಿಯನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

4.(1)ಬಿ(i) ಸಂಸ್ಥೆಯ ರಚನೆ, ಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು



**ಈ ಇಲಾಖೆಯ ವಿವಿಧ ಶಾಖೆಗಳಲ್ಲಿ ಈ ಕೆಳಕಂಡ ಕೆಲಸಗಳನ್ನು ನಿರ್ವಹಿಸಲಾಗುತ್ತಿದೆ:**

**ಯುವ ಸಬಲೀಕರಣ ಶಾಖೆ:**

1) ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ವಿಷಯಗಳು.

2) ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿಗೆ ಸಂಬಂಧಿಸಿದ ವಿಷಯಗಳು

3) ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಹಲವು ಯೋಜನಾಭಿವೃದ್ಧಿ ಹಾಗೂ ಕ್ರೀಡಾಭಿವೃದ್ಧಿ ಕುರಿತಾದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳ ಅನುಷ್ಠಾನ ಕುರಿತಾದ ವಿಷಯಗಳು

4) ರಾಷ್ಟ್ರೀಯ ಕ್ರೀಡೆಗಳಿಗೆ ಸಂಬಂಧಿಸಿದ ವಿಷಯಗಳು

5) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಗೆ ಸಂಬಂಧಿಸಿದ ವಿಷಯಗಳು.

6) ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮೀಣ ಮಟ್ಟದಲ್ಲಿ ಕ್ರೀಡಾ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕುರಿತಾದ ವಿಷಯಗಳು.

7) ಜಿಲ್ಲಾ ಕ್ರೀಡಾಂಗಣಗಳು, ಕ್ರೀಡಾ ಸಮುಚ್ಚಯಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ಇತ್ಯಾದಿ ವಿಷಯಗಳು, ರಾಜ್ಯ ವಲಯದಿಂದ ಅನುದಾನ ಬಿಡುಗಡೆ ಮಾಡುವ ಹಾಗೂ ಪಂಚಾಯತ್ ಯುವ ಕ್ರೀಡಾ ಔರ್ ಖೇಲ್ ಅಭಿಯಾನ (ಪೈಕಾ) ಇತ್ಯಾದಿ ಕೇಂದ್ರ ಸರ್ಕಾರದ ಸಹಾಯಾನುದಾನ ಕುರಿತಾದ ವಿಷಯಗಳು.

8) ಯುವ ಪ್ರಶಸ್ತಿಗಳ ಕುರಿತಾದ ವಿಷಯಗಳ ನಿರ್ವಹಣೆ.

9) ಅಖಿಲ ಭಾರತ ನಾಗರೀಕ ಸೇವಾ ಕ್ರೀಡಾ ಪಂದ್ಯದಲ್ಲಿ ಭಾಗವಹಿಸುವ ಸರ್ಕಾರಿ ನೌಕರರ ಆಯ್ಕೆ ಹಾಗೂ ನಿಯೋಜನೆ ಕುರಿತಾದ ಪ್ರಸ್ತಾವನೆಗಳ ನಿರ್ವಹಣೆ.

10) ತಾಲ್ಲೂಕು ಕ್ರೀಡಾಂಗಣಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ ಹಾಗೂ ಕೇಂದ್ರ ಸರ್ಕಾರದ ಸಹಾಯಾನುದಾನ ಪಡೆಯುವ ಕುರಿತಂತೆ ಪ್ರಸ್ತಾವ ಸಲ್ಲಿಸುವ ಬಗೆಗಿನ ವಿಷಯಗಳು.

11) ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದ ವಿಷಯಗಳ ನಿರ್ವಹಣೆ.

12) ಮೇಲಿನ ವಿಷಯಗಳಿಗೆ ಸಂಬಂಧಿಸಿದಂತೆ ಕರ್ನಾಟಕ ವಿಧಾನ ಸಭೆ : ವಿಧಾನ ಪರಿಷತ್ ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು, ಗಮನ ಸೆಳೆಯುವ ಸೂಚನೆಗಳು, ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.

13) ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದ ವಿಷಯಗಳು.

**ಸ್ವೀಕೃತಿ ಮತ್ತು ರವಾನೆ ಶಾಖೆ:**

1) ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯಗಳು ಹಾಗೂ ಇದಕ್ಕೆ ಸಂಬಂಧಿಸಿದಂತೆ ವಿಧಾನಸಭೆ : ವಿಧಾನ ಪರಿಷತ್ ಪ್ರಶ್ನೆಗಳು, ಭರವಸೆಗಳು, ಅರ್ಜಿಗಳು ಗಮನ ಸೆಳೆಯುವ ಸೂಚನೆಗಳು ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.

2) ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಗಳು ಹಾಗೂ ಮಾಸಿಕ ಕಾರ್ಯಕ್ರಮ ಅನುಷ್ಠಾನ ವೇಳಾಪಟ್ಟಿ (ಎಂಪಿಕ್) ಸಭೆಗಳ ಕುರಿತು ಸಂಯೋಜನಾ ಕಾರ್ಯಕ್ರಮ.

3) ಸಮನ್ವಯ ಶಾಖೆಗೆ ಅನ್ವಯಿಸುವ ವಿಷಯಗಳು, ವಿಧಾನಸಭೆ : ವಿಧಾನ ಪರಿಷತ್ ಪ್ರಶ್ನೆಗಳು.

**ಆಂತರಿಕ ಆರ್ಥಿಕ ಸಲಹೆಗಾರರ (ಆಯವ್ಯಯ) ಶಾಖೆ:**

1) ಕಂದಾಯ ಇಲಾಖೆ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ

2) ಮೇಲ್ಕಂಡ ಇಲಾಖೆಗಳಿಗೆ ಸಂಬಂಧಿಸಿದಂತೆ ಆಡಿಟ್ ಆಕ್ಷೇಪಣೆ: ಸಿಎಜಿ ಕಂಡಿಕೆಗಳ ಪರಿಶೀಲನೆ.

3) ಆಯವ್ಯಯ ಲೆಕ್ಕ ಶೀರ್ಷಿಕೆಗೆ ಸಂಬಂಧಿಸಿದ ವಿಷಯಗಳು.

4) ಮಹಾಲೇಖಪಾಲರ ತಪಾಸಣಾ ವರದಿ, ಕರಡು ಕಂಡಿಕೆಗಳು, ಸಿ.ಎ.ಜಿ. ರವರ ವರದಿ ಹಾಗೂ ಸಾರ್ವಜನಿಕ ಲೆಕ್ಕಪತ್ರ ವರದಿಗಳ ಕುರಿತಾದ ವಿಷಯಗಳ ನಿರ್ವಹಣೆ.

**ಆಂತರಿಕ ಆರ್ಥಿಕ ಸಲಹೆಗಾರರ (ಅಭಿಪ್ರಾಯ) ಶಾಖೆ:**

ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯ ಹಾಗೂ ಅನುದಾನ ಬಿಡುಗಡೆ ಇತ್ಯಾದಿ ಪ್ರಸ್ತಾವನೆಗಳಿಗೆ ಅಭಿಪ್ರಾಯ ನೀಡುವುದು.

**ರಾಷ್ಟ್ರೀಯ ಸೇವಾ ಯೋಜನಾ ಕೋಶ:**

1) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯ / ನಿರ್ದೇಶನಾಲಯಗಳ ಎನ್.ಎಸ್.ಎಸ್. ಚಟುವಟಿಕೆಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣ.

2) ವಿಶ್ವವಿದ್ಯಾಲಯ / ನಿರ್ದೇಶನಾಲಯಗಳಿಗೆ ಸರಿಯಾದ ಸಮಯಕ್ಕೆ ಅನುದಾನ ಬಿಡುಗಡೆ.

3) ವಿಶ್ವವಿದ್ಯಾಲಯ / ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆ; ವಿಚಾರ ಸಂಕೀರ್ಣ, ಕಾರ್ಯಗಾರ ಇತರೆ ಕಾರ್ಯಕ್ರಮಗಳಿಗೆ ಸರ್ಕಾರದ ಪರವಾಗಿ ಭಾಗವಹಿಸುವುದು.

4) ಸರ್ಕಾರದ ನಿಯಮಾವಳಿಗಳ ರೀತ್ಯಾ ಅನುದಾನವನ್ನು ಬಳಕೆ ಮಾಡಲಾಗಿದೆಯೇ ಎಂಬ ಬಗ್ಗೆ ಪರಿವೀಕ್ಷಣೆ ಮಾಡುವುದು.

5) ಲೆಕ್ಕ ಪತ್ರದ ವರದಿಗಳು, ಕಾರ್ಯಕ್ರಮಗಳ ವರದಿಗಳು ಕಾಲಾನುಕಾಲಕ್ಕೆ ಬರುವಂತೆ ನೋಡಿಕೊಳ್ಳುವುದು.

6) ರಾಜ್ಯ ಮಟ್ಟದ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು.

7) ಅಂತರ ಇಲಾಖಾ ಕಾರ್ಯಕ್ರಮಗಳನ್ನು ಆಯೋಜಿಸುವುದು.

ಅ) ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯೊಂದಿಗೆ ರಾಷ್ಟ್ರೀಯ ಕೋಟೆ, ಸ್ಮಾರಕಗಳ ರಕ್ಷಣೆ.

ಆ) ಕ್ರೆಡಿಲ್‌ನ ಸಹಯೋಗದೊಂದಿಗೆ ಎನರ್ಜಿ ಕ್ಲಬ್‌ಗಳನ್ನು ಕಾಲೇಜುಗಳಲ್ಲಿ ಸ್ಥಾಪನೆ ಮಾಡುವುದು.

ಇ) ರಾಜ್ಯ ಏಡ್ಸ್ ಸೊಸೈಟಿಯೊಂದಿಗೆ ಕಾಲೇಜು ಏಡ್ಸ್ ಶಿಕ್ಷಣ ಕಾರ್ಯಕ್ರಮ (ಎಲ್ಲಾ ಕಾಲೇಜುಗಳಲ್ಲಿ).

ಈ) ಉಚಿತ ಕಾನೂನು ನೆರವು ಶಿಬಿರಗಳು : ಕಾರ್ಯಗಾರಗಳು, ವಿಪತ್ತು ನಿರ್ವಹಣಾ ಕಾರ್ಯಕ್ರಮ.

ಉ) ಇನ್ನಿತರ ಕಾರ್ಯಕ್ರಮಗಳನ್ನು ಆಯಾ ಕಾಲಕ್ಕನುಗುಣವಾಗಿ ಏರ್ಪಡಿಸುವುದು.

8) ರಾಜ್ಯಮಟ್ಟದ ಕಾರ್ಯಕ್ರಮಗಳಾದ ಗಣರಾಜ್ಯೋತ್ಸವ ಪಥ ಸಂಚಲನ ತರಬೇತಿ, ಪಥ ಸಂಚಲನದಲ್ಲಿ ಭಾಗವಹಿಸುವುದು, ರಾಜ್ಯಮಟ್ಟದ ಎನ್.ಎಸ್.ಎಸ್. ಪ್ರಶಸ್ತಿ, ರಾಜ್ಯಮಟ್ಟದ ಯುವಜನೋತ್ಸವ ಕಾರ್ಯಕ್ರಮ ಕಾರ್ಯಗಾರಗಳು, ಎನ್.ಎಸ್.ಎಸ್. ವಿಚಾರ ಸಂಕೀರ್ಣಗಳು ಹಾಗೂ ಇತರೆ ರಾಜ್ಯ ಮಟ್ಟದ ಶಿಬಿರಗಳನ್ನು ಸಂಘಟಿಸುವುದು.

9) ಅನುದಾನಕ್ಕೆ ಸಂಬಂಧಿಸಿದಂತೆ, ಲೆಕ್ಕ ಪರಿಶೋಧನೆ ಹಾಗೂ ಇತರೆ ವರದಿಗಳನ್ನು ಕ್ರೋಢೀಕರಿಸಿ ಮಹಾಲೇಖಪಾಲರು ಮತ್ತು ಕೇಂದ್ರ ಸರ್ಕಾರಕ್ಕೆ ಸಲ್ಲಿಸುವುದು.

10) ಎಲ್ಲಾ ವಿಶ್ವವಿದ್ಯಾಲಯ : ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಂಯೋಜನಾಧಿಕಾರಿಗಳ ನೇಮಕಾತಿ ಸಮಿತಿ ಸಭೆಯಲ್ಲಿ ಭಾಗವಹಿಸುವುದು.

**4(1) (b)(ii) ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ಕರ್ತವ್ಯಗಳ ವಿವರ**

**ಸರ್ಕಾರದ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಇಲಾಖಾ ಸಚಿವರ ಸಾಮಾನ್ಯ ಅಥವಾ ವಿಶೇಷ ನಿರ್ದೇಶನಗಳಿಗೊಳಪಟ್ಟು ಮತ್ತು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮಗಳಿಗೆ ಒಳಪಟ್ಟು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದಂತೆ ವ್ಯವಹಾರ ನಿರ್ವಹಣೆ ಜವಾಬ್ದಾರಿ ಹೊಂದಿರುತ್ತಾರೆ.

ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 7 ಮತ್ತು 30.

**ಸರ್ಕಾರದ ಉಪ ಕಾರ್ಯದರ್ಶಿ :**

ಪ್ರಧಾನ ಕಾರ್ಯದರ್ಶಿರವರ ನಂತರದ ಅಧಿಕಾರಿಯಾಗಿರುತ್ತಾರೆ. ಇಲಾಖಾ ಸಚಿವರು, ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿರವರು ನೀಡುವ ಸೂಚನೆಗಳ ಪ್ರಕಾರ ಕಾರ್ಯನಿರ್ವಹಿಸುತ್ತಾರೆ. ಈ ಇಲಾಖೆಗೆ ಸಂಬಂಧಪಟ್ಟಂತೆ ಸಂಘಟನೆ ಮತ್ತು ವಿಧಾನಾಧಿಕಾರಿಯಾಗಿರುತ್ತಾರೆ.

ಇವರು ಇಲಾಖೆಗೆ ಸಂಬಂಧಿಸಿದ ಶಾಖೆಗಳ ಮೇಲ್ವಿಚಾರಕರಾಗಿರುತ್ತಾರೆ. ಇಲಾಖೆಗಳಲ್ಲಿನ ಎಲ್ಲಾ ಕಡತಗಳು, ಕಾಗದ ಪತ್ರಗಳು ಮತ್ತು ದಾಖಲೆಗಳನ್ನು ಇವರು ಪರಿಶೀಲಿಸುತ್ತಾರೆ. ಪ್ರಕರಣಗಳ ವಿಲೇವಾರಿ ಬಗ್ಗೆ ಕ್ರಮ ಜರುಗಿಸುವುದು ಹಾಗೂ ಪ್ರಮುಖ ವಿಷಯಗಳ ಮೇಲಿನ ಕ್ರಮದ ಬಗ್ಗೆ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರಸ್ತಾವನೆಗಳನ್ನು ಮಂಡಿಸುತ್ತಾರೆ.

**ರಾಜ್ಯ ಸಂಪರ್ಕಾಧಿಕಾರಿ (ರಾಷ್ಟ್ರೀಯ ಸೇವಾ ಯೋಜನಾ ಕೋಶ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ:**

ಇವರು ರಾಜ್ಯ ಎನ್.ಎಸ್.ಎಸ್.ಕೋಶದ ಮೇಲುಸ್ತುವಾರಿಯಲ್ಲಿ, ವಿಶ್ವವಿದ್ಯಾಲಯ / ನಿರ್ದೇಶನಾಲಯಗಳ ಮುಖಾಂತರ ಎನ್.ಎಸ್.ಎಸ್. ಚಟುವಟಿಕೆಗಳ ಮೇಲ್ವಿಚಾರಣೆ, ಕಾಲೇಜು ಮಟ್ಟದಲ್ಲಿ ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ಅಭಿವೃದ್ಧಿಗೊಳಿಸುವ ಮೇಲುಸ್ತುವಾರಿ ಕಾರ್ಯ ನಿರ್ವಹಿಸುತ್ತಾರೆ. ರಾಜ್ಯದ ಎಲ್ಲಾ ವಿಶ್ವವಿದ್ಯಾಲಯ/ ನಿರ್ದೇಶನಾಲಯಗಳ ಎನ್.ಎಸ್.ಎಸ್. ಚಟುವಟಿಕೆಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣ; ವಿಶ್ವವಿದ್ಯಾಲಯ/ ನಿರ್ದೇಶನಾಲಯಗಳಿಗೆ ಅನುದಾನ ಬಿಡುಗಡೆ; ವಿಶ್ವವಿದ್ಯಾಲಯ/ ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆ; ವಿಚಾರ ಸಂಕೀರ್ಣ,

ಕಾರ್ಯಗಾರ, ಇತರೆ ಕಾರ್ಯಕ್ರಮಗಳಿಗೆ ಸರ್ಕಾರದ ಪರವಾಗಿ ಭಾಗವಹಿಸುವುದು; ಸರ್ಕಾರದ ನಿಯಮಾವಳಿಗಳ ರೀತ್ಯಾ ಅನುದಾನವನ್ನು ಬಳಕೆ ಮಾಡಲಾಗಿದೆಯೇ ಎಂಬ ಬಗ್ಗೆ ಪರಿವೀಕ್ಷಣೆ ಮಾಡುವುದು; ಲೆಕ್ಕ ಪತ್ರದ ವರದಿಗಳು, ಕಾರ್ಯಕ್ರಮಗಳ ವರದಿಗಳು ಕಾಲಾನುಕಾಲಕ್ಕೆ ಬರುವಂತೆ ನೋಡಿಕೊಳ್ಳುವುದು; ರಾಜ್ಯ ಮಟ್ಟದ ಎನ್.ಎಸ್.ಎಸ್. ಸಲಹಾ ಸಮಿತಿ ಸಭೆಯನ್ನು ಏರ್ಪಡಿಸುವುದು; ಅನುದಾನಕ್ಕೆ ಸಂಬಂಧಿಸಿದಂತೆ, ಲೆಕ್ಕ ಪರಿಶೋಧನೆ ಹಾಗೂ ಇತರೆ ವರದಿಗಳನ್ನು ಕ್ರೋಢೀಕರಿಸಿ ಮಹಾಲೇಖಪಾಲರು ಮತ್ತು ಕೇಂದ್ರ ಸರ್ಕಾರಕ್ಕೆ ಸಲ್ಲಿಸುವುದು; ಎಲ್ಲಾ ವಿಶ್ವವಿದ್ಯಾಲಯ/ ನಿರ್ದೇಶನಾಲಯಗಳ ಎನ್.ಎಸ್.ಎಸ್. ಸಂಯೋಜನಾಧಿಕಾರಿಗಳ ನೇಮಕಾತಿ ಸಮಿತಿ ಸಭೆಯಲ್ಲಿ ಭಾಗವಹಿಸುವುದು, ಇತ್ಯಾದಿ ಇವರ ಪ್ರಮುಖ ಕರ್ತವ್ಯಗಳಾಗಿರುತ್ತದೆ.

**ಆಂತರಿಕ ಆರ್ಥಿಕ ಸಲಹೆಗಾರರು :**

ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಆಯವ್ಯಯ, ಮುಂಗಡ, ಲೆಕ್ಕತನಿಖೆ ಆಕ್ಷೇಪಣೆ, ಆಡಿಟ್ ಪ್ಯಾರಾ, ತನಿಖಾ ವರದಿ, ಆಯವ್ಯಯ ಮಾಹಿತಿಗಳನ್ನು ಆರ್ಥಿಕ ಇಲಾಖೆಗೆ ನೀಡುವುದು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಮತ್ತು ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಪಟ್ಟ ಯೋಜನೆ ಮತ್ತು ಯೋಜನೇತರ ಆಯವ್ಯಯ/ ಹಣಕಾಸು ವಿಷಯದ ಬಗ್ಗೆ ಅಭಿಪ್ರಾಯ ನೀಡುತ್ತಾರೆ.

**ಸರ್ಕಾರದ ಅಧೀನ ಕಾರ್ಯದರ್ಶಿ :**

ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಆದೇಶಗಳನ್ನು ಹೊರಡಿಸುವ ಅಧಿಕಾರಿಯಾಗಿರುತ್ತಾರೆ. ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 19 ಕಾರ್ಯನಿರ್ವಹಣೆ ಸಂಬಂಧದಲ್ಲಿ ಹಾಗೂ ಶಿಸ್ತಿನ ಸಂಬಂಧದಲ್ಲಿ ತನ್ನ ಪ್ರಭಾರದಲ್ಲಿರುವ ಶಾಖೆಯ ನಿಯಂತ್ರಣಾಧಿಕಾರವನ್ನು ಚಲಾಯಿಸುತ್ತಾರೆ. ಕಡತಗಳನ್ನು ಉಪಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿಯವರಿಗೆ ಸಲ್ಲಿಸುತ್ತಾರೆ.

ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಮತ್ತು ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದ ವಿಷಯಗಳ ಕುರಿತಂತೆ ಯುವ ಸಬಲೀಕರಣ ಶಾಖೆ ಹಾಗೂ ಸ್ವೀಕೃತಿ ಮತ್ತು ರವಾನೆ ಶಾಖೆಯ ಪೀಠಾಧಿಕಾರಿ / ಶಾಖಾಧಿಕಾರಿಯವರಿಂದ ಸಲ್ಲಿಸಲ್ಪಟ್ಟ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಮೇಲಾಧಿಕಾರಿಗಳಿಗೆ ಮಂಡಿಸುವುದು, ಪ್ರತಿ ತಿಂಗಳು ಮಾಸಿಕ ಕಾರ್ಯಕ್ರಮ ಅನುಷ್ಠಾನ ವೇಳಾಪಟ್ಟಿ(ಎಂಪಿಕ್) ಸಭೆಗೆ ಹಾಜರಾಗಿ ವಿವಿಧ ವಿಷಯಗಳ ಬಗ್ಗೆ ಮುಂದಿನ ಕ್ರಮ ಜರುಗಿಸುವುದು, ವಿಧಾನಸಭೆ / ವಿಧಾನ ಪರಿಷತ್ತು ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸುವುದು ಇತ್ಯಾದಿ ಹಾಗೂ ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕಾರ್ಯ ನಿರ್ವಹಿಸುತ್ತಾರೆ.

**ಪೀಠಾಧಿಕಾರಿ (ಯುವ ಸಬಲೀಕರಣ ಶಾಖೆ) :**

ಇವರು ಶಾಖೆಯ ಮೇಲ್ವಿಚಾರಣೆಯ ಕಾರ್ಯನಿರ್ವಹಿಸುತ್ತಾರೆ. ಶಾಖೆಯ ಸಿಬ್ಬಂದಿಗಳ ಮೇಲ್ವಿಚಾರಣೆ ನಡೆಸುವುದು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಮತ್ತು ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದಂತೆ ಇಲಾಖಾ ಮುಖ್ಯಸ್ಥರುಗಳಿಂದ ಸ್ವೀಕೃತವಾಗುವ ಎಲ್ಲಾ ಯೋಜನೆ / ಯೋಜನೇತರ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳ ಹಾಗೂ ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಅಧಿಕಾರಿಗಳ ಸೇವಾ ವಿಷಯ ಇವೇ ಮುಂತಾದವುಗಳ ಬಗ್ಗೆ ಸಹಾಯಕರು / ಹಿರಿಯ ಸಹಾಯಕರುಗಳಿಂದ ಮಂಡಿಸಲಾದ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಆದೇಶಕ್ಕಾಗಿ ಕಡತವನ್ನು ಮೇಲಾಧಿಕಾರಿಗಳಿಗೆ ಮಂಡಿಸುತ್ತಾರೆ. ವಿಧಾನಸಭೆ / ವಿಧಾನ ಪರಿಷತ್ತು ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸುವುದು ಇತ್ಯಾದಿ ಹಾಗೂ ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕಾರ್ಯ ನಿರ್ವಹಿಸುತ್ತಾರೆ.

**ಶಾಖಾಧಿಕಾರಿ (ಸ್ವೀಕೃತಿ ಮತ್ತು ರವಾನೆ ಶಾಖೆ):**

ಇಲಾಖೆಗೆ ಬರುವ ಎಲ್ಲ ಕಾಗದಪತ್ರಗಳನ್ನು ಸ್ವೀಕರಿಸುವುದು. ಸ್ವೀಕರಿಸಿದ ಪತ್ರಗಳನ್ನು ಸಂಬಂಧಿಸಿದ ಶಾಖೆಗಳಿಗೆ ರವಾನಿಸುವುದು. ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಹಾಗೂ ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ಅಧಿಕಾರಿಗಳ ಸೇವಾ ವಿಷಯದ ಬಗ್ಗೆ ಹಾಗೂ ಈ ಇಲಾಖೆಗೆ ಸಂಬಂಧಿಸಿದ ಎಲ್ಲಾ ಸಂಯೋಜನಾ ವಿಷಯಗಳ ಬಗ್ಗೆ ಸಹಾಯಕರು / ಹಿರಿಯ ಸಹಾಯಕರುಗಳಿಂದ ಸಲ್ಲಿಸಲ್ಪಟ್ಟ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ, ಆದೇಶಕ್ಕಾಗಿ ಕಡತವನ್ನು ಮೇಲಾಧಿಕಾರಿಗಳಿಗೆ ಮಂಡಿಸುತ್ತಾರೆ. ವಿಧಾನಸಭೆ / ವಿಧಾನ ಪರಿಷತ್ತು ಪ್ರಶ್ನೆಗಳಿಗೆ ಉತ್ತರವನ್ನು ತಯಾರಿಸುವುದು ಇತ್ಯಾದಿ ಹಾಗೂ ಕರ್ನಾಟಕ ಸಚಿವಾಲಯ ಕೈಪಿಡಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕಾರ್ಯ ನಿರ್ವಹಿಸುತ್ತಾರೆ.

**ಶಾಖಾಧಿಕಾರಿ (ಆಂತರಿಕ ಆರ್ಥಿಕ ಸಲಹೆಗಾರರ ಅಭಿಪ್ರಾಯ ಶಾಖೆ):**

ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಆಡಳಿತಾತ್ಮಕ ಶಾಖೆಗಳಿಂದ ಬಂದ ಸಿಬ್ಬಂದಿಗಳ ಸೇವಾ ವಿಷಯಗಳು ಹಾಗೂ ಹಣಕಾಸಿಗೆ ಸಂಬಂಧಿಸಿದ ಪ್ರಸ್ತಾವನೆಗಳ ಬಗ್ಗೆ ಸಹಾಯಕರು / ಹಿರಿಯ ಸಹಾಯಕರುಗಳಿಂದ ಮಂಡಿಸಲ್ಪಟ್ಟ ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ, ಆಂತರಿಕ ಆರ್ಥಿಕ ಸಲಹೆಗಾರರಿಗೆ ಕಡತವನ್ನು ಮಂಡಿಸುತ್ತಾರೆ.

**ಶಾಖಾಧಿಕಾರಿ (ಆಂತರಿಕ ಆರ್ಥಿಕ ಸಲಹೆಗಾರರ ಆಯವ್ಯಯ ಶಾಖೆ):**

ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ ಹಾಗೂ ಆಡಿಟ್ ಆಕ್ಷೇಪಣೆಗಳ ಬಗ್ಗೆ ಸಹಾಯಕರು / ಹಿರಿಯ ಸಹಾಯಕರುಗಳಿಂದ ಮಂಡಿಸಲ್ಪಟ್ಟ ಕಡತಗಳನ್ನು ಪರಿಶೀಲಿಸಿ, ಆಂತರಿಕ ಆರ್ಥಿಕ ಸಲಹೆಗಾರರಿಗೆ ಕಡತವನ್ನು ಮಂಡಿಸುತ್ತಾರೆ.

**ಹಿರಿಯ ಸಹಾಯಕರು (ಯುವ ಸಬಲೀಕರಣ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಕರ್ನಾಟಕ ಕ್ರೀಡಾ ಪ್ರಾಧಿಕಾರಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು; ಯುವಪ್ರಶಸ್ತಿ ಮತ್ತು ಕ್ರೀಡಾ ಪ್ರಶಸ್ತಿಗಳ ಕುರಿತಾದ ವಿಷಯಗಳ ನಿರ್ವಹಣೆ; ಅಖಿಲ ಭಾರತ ನಾಗರೀಕ ಸೇವಾ ಕ್ರೀಡಾ ಪಂದ್ಯದಲ್ಲಿ ಭಾಗವಹಿಸುವ ಸರ್ಕಾರಿ ನೌಕರರ ಆಯ್ಕೆ ಹಾಗೂ ನಿಯೋಜನೆ ಕುರಿತಾದ ಪ್ರಸ್ತಾವಗಳ ನಿರ್ವಹಣೆ; ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮೀಣ ಮಟ್ಟದಲ್ಲಿ ಕ್ರೀಡಾ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಕುರಿತಾದ ವಿಷಯಗಳು; ಜಿಲ್ಲಾ ಕ್ರೀಡಾಂಗಣಗಳು, ಕ್ರೀಡಾ ಸಮುಚ್ಚಯಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ, ರಾಜ್ಯ ವಲಯದಿಂದ ಅನುದಾನ ಬಿಡುಗಡೆ ಮಾಡುವ ಹಾಗೂ ಕೇಂದ್ರ ಸರ್ಕಾರದ ಸಹಾಯಾನುದಾನ ಕೋರಿ ಪ್ರಸ್ತಾವ ಸಲ್ಲಿಸುವ ಕುರಿತಾದ ವಿಷಯಗಳು; ತಾಲ್ಲೂಕು ಕ್ರೀಡಾಂಗಣಗಳ ನಿರ್ಮಾಣ ಕುರಿತಂತೆ ಆಡಳಿತಾತ್ಮಕ ಅನುಮೋದನೆ ನೀಡುವ ಕೇಂದ್ರ ಸರ್ಕಾರದ ಸಹಾಯಾನುದಾನ ಪಡೆಯುವ ಕುರಿತಾದ ಪ್ರಸ್ತಾವನೆ ಬಗೆಗಿನ ವಿಷಯಗಳು.

ಈ ವಿಷಯಗಳಿಗೆ ಸಂಬಂಧಿಸಿದಂತೆ ವಿಧಾನಸಭೆ : ವಿಧಾನ ಪರಿಷತ್ ಪ್ರಶ್ನೆಗಳು. ಭರವಸೆಗಳು, ಅರ್ಜಿಗಳು, ಗಮನ ಸೆಳೆಯುವ ಸೂಚನೆಗಳು ಇತ್ಯಾದಿ ಹಾಗೂ ನ್ಯಾಯಾಲಯ ಪ್ರಕರಣಗಳು.

**ಹಿರಿಯ ಸಹಾಯಕರು (ಸ್ವೀಮರ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದಂತೆ ಸೇವಾ ವಿಷಯಗಳ ನಿರ್ವಹಣೆ ಅದಕ್ಕೆ ಸಂಬಂಧಿಸಿದಂತೆ ವಿಧಾನಸಭೆ, ವಿಧಾನ ಪರಿಷತ್ ಪ್ರಶ್ನೆಗಳು ಇತ್ಯಾದಿ ಹಾಗೂ ನ್ಯಾಯಾಲಯಗಳ ಪ್ರಕರಣಗಳು.

**ಹಿರಿಯ ಸಹಾಯಕರು (ಆಂತರಿಕ ಆರ್ಥಿಕ ಸಲಹೆಗಾರರ ಆಯವ್ಯಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಆಯವ್ಯಯ ತಯಾರಿಕೆ ಹಾಗೂ ಆಡಿಟ್ ಆಕ್ಷೇಪಣೆಗಳ ವಿಷಯಗಳು. ಮಹಾಲೇಖಪಾಲರ ತಪಾಸಣಾ ವರದಿ, ಕರಡು ಕಂಡಿಕೆಗಳು, ಸಿ.ಎ.ಜಿ.ರವರ ವರದಿ ಹಾಗೂ ಸಾರ್ವಜನಿಕ ಲೆಕ್ಕಪತ್ರ ವರದಿಗಳ ಕುರಿತಾದ ವಿಷಯಗಳ ನಿರ್ವಹಣೆ.

**ಹಿರಿಯ ಸಹಾಯಕರು (ಆಂತರಿಕ ಆರ್ಥಿಕ ಸಲಹೆಗಾರರ ಅಭಿಪ್ರಾಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಹಾಗೂ ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಪಟ್ಟ ಸೇವಾ ವಿಷಯಗಳ ನಿರ್ವಹಣೆ.

**ಸಹಾಯಕರು (ಯುವ ಸಬಲೀಕರಣ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿಗೆ ಸಂಬಂಧಿಸಿದ ವಿಷಯಗಳು. ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಹಲವು ಯುವಜನಾಭಿವೃದ್ಧಿ ಹಾಗೂ ಕ್ರೀಡಾಭಿವೃದ್ಧಿ ಕುರಿತಾದ ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳ ಅನುಷ್ಠಾನ ಕುರಿತಾದ ವಿಷಯಗಳ ಸಂಸ್ಕರಣೆ, ಪಂಚಾಯತ್ ಯುವ ಕ್ರೀಡಾ ಔರ್ ಖೇಲ್ ಅಭಿಯಾನ (ಪೈಕಾ) ಯೋಜನೆಯ ವಿಷಯಗಳು, ಇತ್ಯಾದಿ ಅನುದಾನ ಬಿಡುಗಡೆ ಕುರಿತಾದ ಆದೇಶ ಹೊರಡಿಸುವಿಕೆ ವಿಷಯಗಳ ನಿರ್ವಹಣೆ.

**ಸಹಾಯಕರು (ಸ್ವೀಮರ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಗಳು ಹಾಗೂ ವಿವಿಧ ಹಂತದ ಮಾಸಿಕ ಪ್ರಗತಿ ಪರಿಶೀಲನ ಸಭೆ ಹಾಗೂ ಇತರ ಸಭೆಗಳ ಕುರಿತು ಸಂಯೋಜನಾಕ್ರಮ. ವಿಧಾನಸಭೆ / ವಿಧಾನ ಪರಿಷತ್ ಸಾಮಾನ್ಯ ಪ್ರಶ್ನೆಗಳು, ಭರವಸೆಗಳು, ಇತ್ಯಾದಿಗಳ ಸಂಯೋಜನಾ ವಿಷಯ: ಇಲಾಖೆಗೆ ಸಂಬಂಧಿಸಿದ ಉಳಿದೆಲ್ಲ ವಿಷಯಗಳ ನಿರ್ವಹಣೆ.

**ಸಹಾಯಕರು (ಸ್ವೀಮರ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಸಭೆಗಳು ಹಾಗೂ ವಿವಿಧ ಹಂತದ ಮಾಸಿಕ ಪ್ರಗತಿ ಪರಿಶೀಲನ ಸಭೆ ಹಾಗೂ ಇತರ ಸಭೆಗಳ ಕುರಿತು ಸಂಯೋಜನಾಕ್ರಮ. ವಿಧಾನಸಭೆ / ವಿಧಾನ ಪರಿಷತ್ ಸಾಮಾನ್ಯ ಪ್ರಶ್ನೆಗಳು, ಭರವಸೆಗಳು, ಇತ್ಯಾದಿಗಳ ಸಂಯೋಜನಾ ವಿಷಯ: ಇಲಾಖೆಗೆ ಸಂಬಂಧಿಸಿದ ಉಳಿದೆಲ್ಲ ವಿಷಯಗಳ ನಿರ್ವಹಣೆ.

**ಸಹಾಯಕರು (ಆಯವ್ಯಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟ ಪ್ರಸ್ತಾವನೆಗಳಿಗೆ ಹಣ ಬಿಡುಗಡೆ ಮಾಡುವ ವಿಷಯಗಳ ಪರಿಶೀಲನೆ ಹಾಗೂ ಇತರೆ ವಿಷಯಗಳ ನಿರ್ವಹಣೆ.

**ಸಹಾಯಕರು (ಅಭಿಪ್ರಾಯ ಶಾಖೆ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟಂತೆ ಅಭಿಪ್ರಾಯಕ್ಕಾಗಿ ಸ್ವೀಕರಿಸಿದ ಪ್ರಸ್ತಾವನೆಗಳನ್ನು ಪರಿಶೀಲಿಸುವುದು ಹಾಗೂ ಇತರೆ ವಿಷಯಗಳು.

**ಅಕೌಂಟೆಂಟ್ (ಲೆಕ್ಕಾಧಿಕಾರಿ):**

ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದಂತೆ, ಲೆಕ್ಕಪತ್ರ, ನಗದು ಪುಸ್ತಕಗಳ ನಿರ್ವಹಣೆ, ಲೆಕ್ಕಪತ್ರ ಕ್ರೋಢೀಕರಣ, ಮಹಾಲೇಖಪಾಲರ ಆಡಿಟ್ ಪ್ಯಾರ, ಎಂ.ಎಂ.ಆರ್./ಆಯವ್ಯಯ ತಯಾರಿಕೆ, ಅನುದಾನ ಮರುಪಾವತಿ, ಸಂಬಳದ ಬಿಲ್ಲುಗಳು ಇವೇ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

**ಆಪ್ತ ಕಾರ್ಯದರ್ಶಿ ಗ್ರೇಡ್–2:**

ಇವರು ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಯವರ ನಿರ್ದೇಶನಗಳಿಗೆ ಒಳಪಟ್ಟು ಕಾರ್ಯನಿರ್ವಹಿಸುತ್ತಾರೆ.

**ಸಹಾಯಕರು (ರಾಷ್ಟ್ರೀಯ ಸೇವಾ ಯೋಜನಾ ಕೋಶ):**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ, ರಾಷ್ಟ್ರೀಯ ಸೇವಾ ಯೋಜನಾ ವಿಷಯಕ್ಕೆ ಸಂಬಂಧಿಸಿದಂತೆ ಎಲ್ಲ ವಿಶ್ವವಿದ್ಯಾಲಯ / ನಿರ್ದೇಶನಾಲಯಗಳ ಸಾಮಾನ್ಯ ಕಾರ್ಯನಿರ್ವಹಣೆ, ವಿಶೇಷ ಶಿಬಿರಗಳಿಗೆ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆ, ಸಲಹಾ ಸಮಿತಿ ಸಭೆಗೆ ಸಂಬಂಧಿಸಿದ ವಿಷಯಗಳು, ಇತ್ಯಾದಿಗಳ ಬಗ್ಗೆ ಪರಿಶೀಲಿಸಿ ಕಡತವನ್ನು ರಾಜ್ಯ ಸಂಪರ್ಕಾಧಿಕಾರಿಯವರಿಗೆ ಮಂಡಿಸುತ್ತಾರೆ.

**ಶೀಘ್ರಲಿಪಿಗಾರರು:**

ಇವರು ಅಧಿಕಾರಿಗಳಿಂದ ಉಕ್ತಲೇಖನವನ್ನು ಪಡೆದು ಪತ್ರಗಳನ್ನು ಮತ್ತು ವರದಿಗಳನ್ನು ತಯಾರಿಸಿ ಅಧಿಕಾರಿಗಳಿಗೆ ಬರುವ ಕಾಗದಪತ್ರಗಳು ಹಾಗೂ ಕಡತಗಳನ್ನು ಸ್ವೀಕರಿಸುವುದು. ಸಭೆ / ಸಮಿತಿಗಳ ದಿನಾಂಕಗಳನ್ನು ಗುರುತಿಸಿ, ಅಧಿಕಾರಿಗಳಿಗೆ ನೆನಪಿಸುವುದು ಹಾಗೂ ಕಡತಗಳನ್ನು ಪಡೆದು ಸಲ್ಲಿಸುವುದು, ಸಭೆಯ ನಡವಳಿಗಳನ್ನು ತೆಗೆದುಕೊಂಡು ಕರಡನ್ನು ತಯಾರಿಸುವುದು, ಗಣಕಯಂತ್ರದ ಮೂಲಕ ಎಲ್‌ಎಂಎಸ್ / ಎಫ್‌ಎಂಎಸ್ ನಿರ್ವಹಿಸುವುದು ಹಾಗೂ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು.

**ಬೆರಳಚ್ಚುಗಾರರು:**

ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಂತೆ ಕಾರ್ಯನಿರ್ವಹಿಸುವುದು ಸೇರಿದಂತೆ ಶಾಖೆಯಲ್ಲಿನ ಎಲ್ಲ ಬೆರಳಚ್ಚು ಕೆಲಸಗಳನ್ನು ನಿರ್ವಹಿಸುವುದು.

**ವಾಹನ ಚಾಲಕರು:** ವಾಹನವನ್ನು ಸುಸ್ಥಿತಿಯಲ್ಲಿಟ್ಟು, ವಾಹನ ಚಾಲನೆ ಕಾರ್ಯನಿರ್ವಹಿಸುತ್ತಾರೆ.

**ದಲಾಯತ್:**

ಇವರು ಕಛೇರಿಗಳನ್ನು ಸ್ವಚ್ಛವಾಗಿಡುವುದು ಪತ್ರಗಳನ್ನು ಮತ್ತು ಕಡತಗಳನ್ನು ವಿವಿಧ ಶಾಖೆಗಳಿಗೆ / ಇಲಾಖೆಗಳಿಗೆ ನಿಯಮಾನುಸಾರ ನೀಡುವುದು ಮುಕ್ತಾಯಗೊಳಿಸಿದ ಕಡತಗಳನ್ನು ಸರಿಯಾಗಿ ಹೊಲೆದು ದಾಖಲೆಗಳ ಕೊಠಡಿಗೆ ತೆಗೆದುಕೊಂಡು ಹೋಗುವ ಇವೇ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಾರೆ.

**4.(1)ಬಿ(iii)– ನಿರ್ಣಯ ತೆಗೆದುಕೊಳ್ಳುವಲ್ಲಿ ಅನುಸರಿಸಲಾಗುವ ವಿಧಿ ವಿಧಾನಗಳು, ಪರಿವೀಕ್ಷಣೆ ಮತ್ತು ಜವಾಬ್ದಾರಿಗಳು:**

ಯಾವುದೇ ಪ್ರಕರಣಕ್ಕೆ ಸಂಬಂಧಿಸಿದಂತೆ, ಸಂಬಂಧಪಟ್ಟ ಶಾಖೆಯಲ್ಲಿ ಸ್ವೀಕರಿಸುವ ಟಪಾಲಿನ ಹಂತದಲ್ಲಿ ಅಧೀನ ಕಾರ್ಯದರ್ಶಿಗೆ ಸಲ್ಲಿಸುವುದು. ನಂತರ ಇದನ್ನು ಶಾಖಾಧಿಕಾರಿ ನೋಡಿ ಸಹಿ ಹಾಕಿದ ನಂತರ ಕಿರಿಯ ಸಹಾಯಕರು, ಗತಣಕಯಂತ್ರದಲ್ಲಿ ವಿಷಯವನ್ನು ನಮೂದಿಸಿ ಸಂಖ್ಯೆ ಗುರುತಿಸಿ ಸಂಬಂಧಪಟ್ಟ ಹಿರಿಯ ಸಹಾಯಕರ / ಸಹಾಯಕರಿಗೆ ನೀಡುವುದು. ಹಿರಿಯ ಸಹಾಯಕರು / ಸಹಾಯಕರು / ಸಹಾಯಕರು ಸ್ವೀಕೃತಿಯ ಕುರಿತು ಪರಿಶೀಲಿಸಿ ಅವಶ್ಯವಿರುವ ನಿಯಮ ಸೂಚನೆ ಪ್ರತಿಗಳು ಹಾಗೂ ಈ ಬಗ್ಗೆ ಈಗಾಗಲೇ ಕಡತ ಪ್ರಾರಂಭಿಸಲಾಗಿದ್ದಲ್ಲಿ ಅದರೊಂದಿಗೆ ಶಾಖಾಧಿಕಾರಿಗೆ ಸಲ್ಲಿಸಬೇಕು. ಶಾಖಾಧಿಕಾರಿ ಟಿಪ್ಪಣಿಯನ್ನು ಪರಿಶೀಲಿಸಿ, ತಮ್ಮ ಟಿಪ್ಪಣಿಯನ್ನು ಸ್ಪಷ್ಟವಾಗಿ ದಾಖಲಿಸಿ ಅಧೀನ ಕಾರ್ಯದರ್ಶಿಗಳಿಗೆ ಸಲ್ಲಿಸತಕ್ಕದ್ದು. ಹೆಚ್ಚುವರಿ ಮಾಹಿತಿ ಅವಶ್ಯವಿದ್ದಲ್ಲಿ ಅವುಗಳನ್ನು ಪಡೆಯಲು ಅಧೀನ ಕಾರ್ಯದರ್ಶಿಯು ಸೂಚಿಸಿ ಕಡತ ಹಿಂದಿರುಗಿಸತಕ್ಕದ್ದು. ಇದನ್ನು ಅನುಸರಿಸಿ ಕ್ಷೇತ್ರ ಇಲಾಖೆಗಳಿಂದ ಮಾಹಿತಿ ಪಡೆಯಲು ಕರಡು ಪತ್ರವನ್ನು ಮಂಡಿಸಿ ಶಾಖಾಧಿಕಾರಿ ಹಾಗೂ ಅಧೀನ ಕಾರ್ಯದರ್ಶಿಯವರ ಹಂತದಲ್ಲಿ ಅನುಮೋದನೆ ಪಡೆದು ಅವಶ್ಯ ಪತ್ರವನ್ನು ಹೊರಡಿಸುವುದು, ಮಾಹಿತಿ ಬಂದ ನಂತರ ಅಥವಾ ಅವಶ್ಯವಿಲ್ಲದಿದ್ದಲ್ಲಿ, ಮೇಲೆ ಸೂಚಿಸಿದ ಹಂತವನ್ನು ಅನುಸರಿಸಿ ಅಧೀನ ಕಾರ್ಯದರ್ಶಿಯವರಿಗೆ ಸಲ್ಲಿಸತಕ್ಕದ್ದು. ಅಧೀನ ಕಾರ್ಯದರ್ಶಿಯವರ ಸ್ಪಷ್ಟವಾದ ಅಭಿಪ್ರಾಯವನ್ನು ದಾಖಲಿಸಿ ಆರ್ಥಿಕ ಅಥವಾ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಥವಾ ಕಾನೂನು ಇಲಾಖೆ ಇತ್ಯಾದಿ ಇಲಾಖೆಗಳ ಸಮಾಲೋಚನೆ ಅವಶ್ಯವಿದ್ದಲ್ಲಿ ಸಲ್ಲಿಸತಕ್ಕದ್ದು. ಅಪರ / ಸಹ /

ಉಪಕಾರ್ಯದರ್ಶಿಯವರ ಹಂತದಲ್ಲಿ ಅವಶ್ಯವಿದ್ದಲ್ಲಿ ಸಂಬಂಧಪಟ್ಟ ಇಲಾಖೆಗಳೊಡನೆ ಸಮಾಲೋಚಿಸಿ ಅಭಿಪ್ರಾಯ ಪಡೆದ ನಂತರ, ಅಧಿಕಾರ ಪ್ರತ್ಯಾಯೋಜನೆಯನ್ನು ದಾಖಲಿಸಿ ಕಾರ್ಯದರ್ಶಿಯವರಿಗೆ ಸಲ್ಲಿಸತಕ್ಕದ್ದು.

ಆರ್ಥಿಕ ಯೋಜನೆಗಳನ್ವಯ ಅಥವಾ ನಿಯಮಗಳಲ್ಲಿ ಸೂಚಿಸಿರುವ ಅಧಿಕಾರದನ್ವಯ ಪ್ರಧಾನ ಕಾರ್ಯದರ್ಶಿಯವರು ನಿರ್ಣಯ ತೆಗೆದುಕೊಳ್ಳಬಹುದು ಹಾಗೂ ಅಧಿಕಾರ ಪ್ರತ್ಯಾಯೋಜನೆ ಇಲ್ಲದಿದ್ದಲ್ಲಿ ಮಾನ್ಯ ಸಚಿವರಿಗೆ ಕಡತವನ್ನು ಸಲ್ಲಿಸತಕ್ಕದ್ದು. ಈ ರೀತಿ ನಿರ್ಣಯ ತೆಗೆದುಕೊಂಡ ನಂತರ ಕರಡು ಆದೇಶದ ಅನುಮೋದನೆಯನ್ನು ಅಧೀನ ಕಾರ್ಯದರ್ಶಿ ಹಂತದಲ್ಲಿ ಪಡೆದು ಅಂತಿಮ ಆದೇಶ ಹೊರಡಿಸುವುದು.

**ಹೊಣೆಗಾರಿಕೆ, ಮೇಲ್ವಿಚಾರಣೆ:** ವಿಷಯ ನಿರ್ವಾಹಕರು ಶಾಖೆಯಲ್ಲಿ ಸ್ವೀಕೃತಿಯಾದ ಪತ್ರಗಳನ್ನು ಆ ಪತ್ರಗಳಿಗೆ ಸಂಬಂಧಪಟ್ಟಂತೆ ಕಡತಗಳಿದ್ದಲ್ಲಿ ಅದರೊಂದಿಗೆ ಸಲ್ಲಿಸುವುದು, ಇಲ್ಲದಿದ್ದಲ್ಲಿ ಹೊಸ ಕಡತವನ್ನು ತೆರೆದು ಸಲ್ಲಿಸುವುದು. ಸ್ವೀಕೃತಿಗೆ ಸಂಬಂಧಪಟ್ಟಂತೆ ವಿಷಯ ಸಂಬಂಧವಾಗಿ ಪರಿಶೀಲಿಸಿ ಕಡತವನ್ನು ಶಾಖಾಧಿಕಾರಿಗೆ ಸಲ್ಲಿಸುವುದು.

ಶಾಖಾಧಿಕಾರಿಯು ವಿಷಯ ನಿರ್ವಾಹಕರು ಸಲ್ಲಿಸಿದ ಕಡತವನ್ನು ಪರಿಶೀಲಿಸುವರು. ಅಲಂಬಿತ ಭಾಷಾ ಶೈಲಿ ಪರಿಶೀಲಿಸುವುದು ಇವರ ಕರ್ತವ್ಯ. ಇವರು ಕಡತದಲ್ಲಿರುವ ಟಿಪ್ಪಣಿಯನ್ನು ಸಂಬಂಧಪಟ್ಟ ನಿಯಮಗಳನುಸಾರವಾಗಿ ಪರಿಶೀಲಿಸಿ, ಹೆಚ್ಚುವರಿ ಟಿಪ್ಪಣಿಯೊಂದಿಗೆ ಮೇಲಾಧಿಕಾರಿಗೆ ಸಲ್ಲಿಸುವರು. ಶಾಖಾಧಿಕಾರಿಯವರು ಕಡತವನ್ನು ಅಧೀನ ಕಾರ್ಯದರ್ಶಿ / ಉಪ ಕಾರ್ಯದರ್ಶಿ / ಜಂಟಿ ಕಾರ್ಯದರ್ಶಿ / ಅಪರ ಕಾರ್ಯದರ್ಶಿ, ಇವರಿಗೆ ಅನುಮೋದನೆಗಾಗಿ ಸಲ್ಲಿಸುವುದು. ತುರ್ತು ಮತ್ತು ಮುಖ್ಯ ಸ್ವೀಕೃತಿಗಳನ್ನು ವಿಷಯ ನಿರ್ವಾಹಕರಿಗೆ ರವಾನಿಸದೆ ತಾವೇ ಸ್ವತಃ ಸಲ್ಲಿಸಲು ಶಾಖಾಧಿಕಾರಿ / ಅಧೀನ ಕಾರ್ಯದರ್ಶಿಯವರಿಗೆ ಅಧಿಕಾರವಿದೆ.

ಪ್ರಧಾನ ಕಾರ್ಯದರ್ಶಿಯವರು ಪ್ರಕರಣಕ್ಕೆ ಸಂಬಂಧಪಟ್ಟಂತೆ ತೀರ್ಮಾನ ತೆಗೆದುಕೊಂಡು ಕಡತವನ್ನು ಹಿಂದಿರುಗಿಸುವರು. ಸರ್ಕಾರದ ನೀತಿಗಳಿಗೆ ಸಂಬಂಧಪಟ್ಟ ವಿಷಯ ಮತ್ತು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ಪ್ರಕಾರ ಸಚಿವರಿಗೆ ಸಲ್ಲಿಸಬೇಕಾದ ವಿಷಯಗಳಲ್ಲಿ ಅಂತಿಮ ತೀರ್ಮಾನಕ್ಕೆ ಕಡತವನ್ನು ಸಲ್ಲಿಸುವರು.

**4(b)(iv) ಕರ್ತವ್ಯಗಳ ನಿರ್ವಹಣೆಯಲ್ಲಿ ಅನುಸರಿಸಬೇಕಾದ ಸೂತ್ರಗಳು:**

ಸಚಿವಾಲಯ ಕಛೇರಿ ಕೈಪಿಡಿ ಮತ್ತು ಕರ್ನಾಟಕ ಸರ್ಕಾರ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ಪ್ರಕಾರ ಕಡತ ವಿಲೇವಾರಿ ಮಾಡುವಲ್ಲಿ ಸಚಿವಾಲಯದ ಇಲಾಖೆಗಳು ಕಾರ್ಯ ನಿರ್ವಹಿಸುತ್ತಿವೆ. ಕಡತ ವಿಲೇವಾರಿ ಮಾಡುವಲ್ಲಿ ಆ ವಿಷಯಕ್ಕೂ ಸಂಬಂಧಪಟ್ಟ ವಿವಿಧ ಶಾಸನ ಮತ್ತು ನ್ಯಾಯಾಲಯದ ಆದೇಶಗಳ ಮೂಲಕ ಪರಿಶೀಲಿಸಲಾಗುತ್ತದೆ.

| | |
|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಸರ್ಕಾರದ ಉಪ ಕಾರ್ಯದರ್ಶಿಗಳು<br>ಸರ್ಕಾರದ ಅಧೀನ ಕಾರ್ಯದರ್ಶಿಗಳು<br>ಶಾಖಾಧಿಕಾರಿಗಳು | ಪ್ರಕರಣಗಳ ಬಗ್ಗೆ ಆದ್ಯತೆಯ ಮೇಲೆ ಹಾಗೂ ತುರ್ತಾಗಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ. |
| ಸಹಾಯಕರು / ಹಿರಿಯ ಸಹಾಯಕರು | ಕಡತಗಳನ್ನು / ಸ್ವೀಕೃತಿಗಳನ್ನು 5 ದಿನಗಳೊಳಗಾಗಿ ನಿರ್ವಹಿಸಬೇಕಾಗಿರುತ್ತದೆ. |
| ಶೀಘ್ರಲಿಪಿಗಾರರು / ಬೆರಳಚ್ಚುಗಾರರು<br>ಕಿರಿಯ ಸಹಾಯಕರು | ಇವರು ತಮಗೆ ವಹಿಸಿದ ಕರ್ತವ್ಯಗಳನ್ನು ಆಯಾಯ ದಿನವೇ ಮುಗಿಸಬೇಕಾಗಿರುತ್ತದೆ. |
| ವಾಹನ ಚಾಲಕರು | ವಾಹನವನ್ನು ಸಿದ್ದತೆಯಲ್ಲಿಡಬೇಕಾಗಿರುತ್ತದೆ. |
| ದಲಾಯತ್ | ಶಾಖೆಯಲ್ಲಿ ಅವರಿಗೆ ವಹಿಸಿದ ಪತ್ರಗಳನ್ನು / ಕಡತಗಳನ್ನು ಆಯಾಯ ದಿನವೇ ಅಧಿಕಾರಿಗಳ ಸೂಚನೆಯಂತೆ ಸಂಬಂಧಿಸಿದ ಅಧಿಕಾರಿಗಳಿಗೆ ಮತ್ತು ಇಲಾಖೆಗಳಿಗೆ ನೀಡಬೇಕಾಗಿರುತ್ತದೆ. |

**4(1)(b)(v) ರನ್ವಯ ಅನುಸರಿಸಬೇಕಾದ ನಿಯಮ ಇತ್ಯಾದಿ ಪಟ್ಟಿ**

1) ಕರ್ನಾಟಕ ನಾಗರೀಕ ಸೇವಾ ನಿಯಮಗಳು
2) ಸರ್ಕಾರಿ ನೌಕರರ ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ಕಾಯ್ದೆ ಮತ್ತು ನಿಯಮಗಳು
3) ಕರ್ನಾಟಕ ಆರ್ಥಿಕ ಸಂಹಿತೆ
4) ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಮರುಪಾವತಿ) ನಿಯಮಗಳು 1962

5) ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977

6) ಸಚಿವಾಲಯ ಕೈಪಿಡಿ

7) ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966

8) ಕರ್ನಾಟಕ ನಾಗರೀಕ ಸೇವೆ (ಪರಿವೀಕ್ಷಣಾವಧಿ) ನಿಯಮಗಳು

9) ಕರ್ನಾಟಕ ನಾಗರೀಕ ಸೇವೆ (ಕಾಲಮಿತಿ ವೇತನ ಬಡ್ತಿ) ನಿಯಮಗಳು

10) ಕರ್ನಾಟಕ ನಾಗರೀಕ ಸೇವೆ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಬಡ್ತಿ) ನಿಯಮಗಳು

11) ಕರ್ನಾಟಕ ನಾಗರೀಕ ಸೇವೆ (ಜೇಷ್ಠತೆ) ನಿಯಮಗಳು

**4(1)(b)(vi) ದಾಖಲೆಗಳ ತಃಖ್ತೆ**

| ಶಾಖೆ | ಕಡತ ಶೀರ್ಷಿಕೆ | ವಿಷಯ |
|---|---|---|
| ಸ್ವೀಮರ | ಯುಇಸೇ | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸೇವಾ ವಿಷಯಗಳು |
| | ಸಮನ | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಿಸಿದ ಸಮನ್ವಯ ವಿಷಯಗಳು |
| ಐಎಫ್ಎ | ಐಎಫ್ಡಬ್ಲೂ | ಆಯವ್ಯಯ ಹಾಗೂ ಆಡಿಟ್ ಪ್ಯಾರ ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದ ವಿಷಯಗಳು |
| ಯುಸಇ | ಯುಸೇಕ್ರೀ | ಕ್ರೀಡಾಂಗಣಗಳಿಗೆ ಸಂಬಂಧಿಸಿದ ವಿಷಯಗಳು |
| | ಯುಸೇಭಾ | ವಿಧಾನಸಭೆ / ವಿಧಾನ ಪರಿಷತ್ತು / ಭರವಸೆಗಳಿಗೆ ಸಂಬಂಧಿಸಿದ ವಿಷಯಗಳು |
| | ಯುರಾಸೇ | ಸರ್ಕಾರಿ ವೈಮಾನಿಕ ತರಬೇತಿ ಶಾಲೆಗೆ ಸಂಬಂಧಿಸಿದ ವಿಷಯಗಳು |
| ರಾಜ್ಯ ಸಂಪರ್ಕಾಧಿಕಾರಿ | ರಾಸೇಯೋ | ರಾಷ್ಟ್ರೀಯ ಸೇವಾ ಯೋಜನೆಗೆ ಸಂಬಂಧಿಸಿದ ಎಲ್ಲ ವಿಷಯಗಳು. |

**4(1)ಬಿ(vii)– ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ:–**

ರೀತಿ ನೀತಿಗಳನ್ನು ರಚಿಸುವಲ್ಲಿ ಅಥವಾ ಅನುಷ್ಠಾನಗೊಳಿಸುವಲ್ಲಿ ಸಾರ್ವಜನಿಕರೊಂದಿಗೆ ಅಥವಾ ಸಾರ್ವಜನಿಕ ಪ್ರತಿನಿಧಿಗಳೊಂದಿಗೆ ಸಮಾಲೋಚನೆ ವ್ಯವಸ್ಥೆ ಇರುವುದಿಲ್ಲ. ಸಾರ್ವಜನಿಕರಿಂದ ಯಾವುದಾದರೂ ಸಲಹೆ / ಸೂಚನೆಗಳು ಸ್ವೀಕೃತವಾದಲ್ಲಿ ಅದನ್ನು ಸರ್ಕಾರದ Policy Formulating Bodyಗೆ ಕಳುಹಿಸುವುದು.

ಕಾಯ್ದೆ ಅಥವಾ ನಿಯಮಗಳಲ್ಲಿ ಪೂರ್ವಭಾವಿಯಾಗಿ ಕರಡು ಕಾಯ್ದೆ ಅಥವಾ ನಿಯಮಗಳನ್ನು ರೂಪಿಸಬೇಕೆಂದು ಉಪಬಂಧಗಳು ಇದ್ದಲ್ಲಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸುವ ಮೂಲಕ ಸದರಿ ವಿಧಾನವನ್ನು ಅನುಸರಿಸಲಾಗುವುದು.

**4(1)ಬಿ(viii)– ಇಲಾಖೆಯಲ್ಲಿರುವ ನಿಗಮ / ಪರಿಷತ್ತು / ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ:–**

ಈ ಇಲಾಖೆಯ ವ್ಯಾಪ್ತಿಯಲ್ಲಿ ಈ ಕೆಳಕಂಡ ಸಂಸ್ಥೆ / ಸಮಿತಿಗಳು ಬರುತ್ತವೆ.

1. ಕರ್ನಾಟಕ ಕ್ರೀಡಾ ಪ್ರಾಧಿಕಾರ, ಬೆಂಗಳೂರು.
2. ಎನ್.ಎಸ್.ಎಸ್.ಕೋಶದ ಸಲಹಾ ಸಮಿತಿ.
3. ಕ್ರೀಡಾಂಗಣ ವ್ಯವಸ್ಥಾಪಕ ಸಮಿತಿ.

**4(1)(b)(ix) ರನ್ವಯ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ:–**

| ಕ್ರ. ಸಂ. | ಹುದ್ದೆಯ ಹೆಸರು | ಅಧಿಕಾರಿ / ನೌಕರರ ಹೆಸರು ಶ್ರೀ / ಶ್ರೀಮತಿ | ಕಛೇರಿ ದೂರವಾಣಿ ಸಂಖ್ಯೆ / ಫ್ಯಾಕ್ಸ್ |
|---|---|---|---|
| | ಸರ್ಕಾರದ ಪ್ರಧಾನ ಕಾರ್ಯದರ್ಶಿ | ಕಪಿಲ್ ಮೋಹನ್ | 22255827/ 22032589<br>ಫ್ಯಾಕ್ಸ್: 22252499 |

| ಕ್ರ. ಸಂ. | ಹುದ್ದೆಯ ಹೆಸರು | ಅಧಿಕಾರಿ / ನೌಕರರ ಹೆಸರು<br>ಶ್ರೀ / ಶ್ರೀಮತಿ | ಕಛೇರಿ ದೂರವಾಣಿ ಸಂಖ್ಯೆ /<br>ಫ್ಯಾಕ್ಸ್ |
|---|---|---|---|
| | ಸರ್ಕಾರದ ಉಪ ಕಾರ್ಯದರ್ಶಿ | ಜಗನ್ನಾಥ್ .ಎನ್ | 22032598 |
| | ರಾಜ್ಯ ಸಂಪರ್ಕಾಧಿಕಾರಿ (ಎನ್.ಎಸ್.ಎಸ್.ಕೋಶ) | ಡಾ॥ ಗಣನಾಥ ಶೆಟ್ಟಿ | 22032442 |
| | ಆಂತರಿಕ ಆರ್ಥಿಕ ಸಲಹೆಗಾರರು | ಜಿ.ಆರ್. ನಾಗರಾಜ್ | 22032545 |
| | ಸರ್ಕಾರದ ಅಧೀನ ಕಾರ್ಯದರ್ಶಿ | ಪ್ರಭುಶಂಕರ್ .ಆರ್. | 22032596 |
| | ಪತ್ರಾಂಕಿತ ಆಪ್ತ ಸಹಾಯಕರು ಗ್ರೇಡ್–II (ಪ್ರಧಾನ ಕಾರ್ಯದರ್ಶಿಯವರ ಆಪ್ತಶಾಖೆ) | ಸುಲೋಚನಾ ಎಂ.ಎಸ್. | 22255827 |
| | ಪತ್ರಾಂಕಿತ ಆಪ್ತ ಸಹಾಯಕಿ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಶಾರದಾ ಎನ್ ಮನೋಚಾರ್ಯ | 22254393 |
| | ಪತ್ರಾಂಕಿತ ಆಪ್ತ ಸಹಾಯಕಿ (ಅಂ.ಆ.ಸ.ಶಾಖೆ) | ಉಮಾ .ಆರ್. | 22262114 |
| | ಪೀಠಾಧಿಕಾರಿ (ಯುವ ಸಬಲೀಕರಣ ಶಾಖೆ) | ಹನುಮಂತರಾಯಪ್ಪ .ಜಿ. | 22032166 |
| | ಶಾಖಾಧಿಕಾರಿ (ಆಯವ್ಯಯ) | ಉಷಾ .ಎಸ್. | 22032829 |
| | ಶಾಖಾಧಿಕಾರಿ (ಅಭಿಪ್ರಾಯ) | ಹರ್ಷರಾಣಿ ಹೆಚ್.ಸಿ. | 22032173 |
| | ಶಾಖಾಧಿಕಾರಿ (ಸ್ವೀಮರ) | ವಿಜಯ .ಜಿ. | 22032170 |
| | ಶಾಖಾಧಿಕಾರಿ (ಪ್ರಧಾನ ಕಾರ್ಯದರ್ಶಿಯವರ ಆಪ್ತಶಾಖೆ) | ಗಾಯತ್ರಿ ದೇವಿ ಎನ್.ಎಸ್. | 22255827 |
| | ಹಿರಿಯ ಸಹಾಯಕರು (ಯುವಜನ ಸೇವೆ) | ಗಿರಿಜಾ ಪಾಟೀಲ್ | 22032166 |
| | ಹಿರಿಯ ಸಹಾಯಕಿ (ಸ್ವೀಮರ) | ಶಾಂತಿ .ಆರ್. | 22032170 |
| | ಹಿರಿಯ ಸಹಾಯಕಿ (ಅಭಿಪ್ರಾಯ) | ಲೀಲಾವತಿ | 22032173 |
| | ಹಿರಿಯ ಸಹಾಯಕಿ (ಆಯವ್ಯಯ) | ಲತಾ .ಆರ್. | 22032829 |
| | ಹಿರಿಯ ಸಹಾಯಕಿ (ಆಯವ್ಯಯ) | ಸಂಜ್ಯೋತ ಪ್ರಕಾಶ ಕರೋಶಿ | 22032829 |
| | ಸಹಾಯಕರು (ಅಭಿಪ್ರಾಯ) | ಖಾಲಿ | – |
| | ಸಹಾಯಕಿ (ಸಮನ್ವಯ) | ಚಂದ್ರಕಲಾ .ಎಸ್. | 22032170 |
| | ಸಹಾಯಕಿ (ಸಮನ್ವಯ) | ರಾಜೇಶ್ವರಿ .ಎನ್. | 22032170 |
| | ಸಹಾಯಕಿ (ಯುವ ಸಬಲೀಕರಣ ಶಾಖೆ) | ನಾಗರತ್ನ .ಎಂ.ವಿ. | 22032166 |
| | ಸಹಾಯಕಿ (ಆಯವ್ಯಯ) | ಲೇಖಾ .ಬಿ.ಜಿ. | 22032829 |
| | ಸಹಾಯಕರು (ಅಭಿಪ್ರಾಯ) | ಖಾಲಿ | 22032173 |
| | ಸಹಾಯಕರು (ಅಭಿಪ್ರಾಯ) | ಖಾಲಿ | 22032173 |
| | ಸಹಾಯಕಿ (ಎನ್.ಎಸ್.ಎಸ್.ಕೋಶ) | ಕುಸುಮಾದೇವಿ .ಎಂ.ಸಿ. | 22032410 |
| | ಅಕೌಂಟೆಂಟ್ (ಎನ್.ಎಸ್.ಎಸ್.ಕೋಶ) | ಶೃಂಗೇಶ್ವರ್ | 22032410 |
| | ಶೀಘ್ರಲಿಪಿಗಾರರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಯೋಗೇಶ್ .ಎಂ.ವಿ. | 22255827 / 22032589 |
| | ಶೀಘ್ರಲಿಪಿಗಾರರು (ಅಧೀನ ಕಾರ್ಯದರ್ಶಿಯವರ ಆಪ್ತ ಶಾಖೆ) | ಖಾಲಿ | 22032596 |

| ಕ್ರ. ಸಂ. | ಹುದ್ದೆಯ ಹೆಸರು | ಅಧಿಕಾರಿ / ನೌಕರರ ಹೆಸರು ಶ್ರೀ / ಶ್ರೀಮತಿ | ಕಛೇರಿ ದೂರವಾಣಿ ಸಂಖ್ಯೆ / ಫ್ಯಾಕ್ಸ್ |
|---|---|---|---|
| | ಶೀಘ್ರಲಿಪಿಗಾರರು (ಎನ್.ಎಸ್.ಎಸ್.ಕೋಶ) | ಕೇಶವಮೂರ್ತಿ .ಎಸ್. | 22032410 |
| | ಕಿರಿಯ ಸಹಾಯಕರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಖಾಲಿ | 22255827 |
| | ಕಿರಿಯ ಸಹಾಯಕರು (ಎನ್.ಎಸ್.ಎಸ್.ಕೋಶ) | ಖಾಲಿ | 22032410 |
| | ಕಿರಿಯ ಸಹಾಯಕ (ಯುವ ಸಬಲೀಕರಣ ಶಾಖೆ) | ಮೋಹನ್‌ರಾಮ್ .ಆರ್.ಎಂ. | 22032166 |
| | ಕಿರಿಯ ಸಹಾಯಕ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಉಪೇಂದ್ರ ಕುಮಾರ್ | 22254393 |
| | ಕಿರಿಯ ಸಹಾಯಕರು (ಸ್ವೀಮರ) | ಖಾಲಿ | 22032170 |
| | ಬೆರಳಚ್ಚುಗಾರ್ತಿ (ಸ್ವೀಮರ) | ಜಯಶ್ರೀ .ಎಂ. | 22032170 |
| | ಬೆರಳಚ್ಚುಗಾರ್ತಿ (ಆಯವ್ಯಯ) | ಶಿವಲೀಲಾ | 22032173 |
| | ವಾಹನ ಚಾಲಕರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಚಂದ್ರಶೇಖರ್ | 22032589 |
| | ವಾಹನ ಚಾಲಕರು (ಎನ್.ಎಸ್.ಎಸ್.ಕೋಶ) | ಲಕ್ಕಪ್ಪ | 22032410 |
| | ವಾಹನ ಚಾಲಕರು (ಸಾಮೂಹಿಕ ವಾಹನ) | ವೆಂಕಟೇಶ್ ಮೂರ್ತಿ | 22254393 |
| | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಮಂಚಮ್ಮ | 22032589 |
| | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಕೆಂಪೇಗೌಡ | 22032589 |
| | ದಲಾಯತ್ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ನಾರಾಯಣಶೆಟ್ಟಿ | 22254393 |
| | ದಲಾಯತ್ (ಸ್ವೀಮರ) | ವಿಜಯಮ್ಮ .ಎ.ಎಸ್. | 22032170 |
| | ದಲಾಯತ್ ( ಯುವ ಸಬಲೀಕರಣ ಶಾಖೆ) | ಖಾಲಿ | 22032166 |
| | ದಲಾಯತ್ (ಅಭಿಪ್ರಾಯ) | ನಾಗರತ್ನಮ್ಮ | 22032713 |
| | ದಲಾಯತ್ (ಆಯವ್ಯಯ) | ಖಾಲಿ | 22032829 |
| | ದಲಾಯತ್ (ಎನ್.ಎಸ್.ಎಸ್.ಕೋಶ) | ದೇವರಾಜ್ .ಎನ್.ವಿ. | 22032410 |
| | ಡಾಟಾ ಎಂಟ್ರಿ ಆಪರೇಟರ್ (ಯುವ ಸಬಲೀಕರಣ ಶಾಖೆ) | ಸಂತೋಷ್ .ಕೆ. | 22032166 |
| | ಡಾಟಾ ಎಂಟ್ರಿ ಆಪರೇಟರ್ (ಸ್ವೀಮರ) | ಜಯರಾಮಯ್ಯ .ಎನ್. | 22032170 |

4(1)(b)(x) ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದ ತಿಂಗಳ ವೇತನ / ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು.

ನಿಯಮಗಳಲ್ಲಿ ಅವಕಾಶ ಮಾಡಿದ ವ್ಯವಸ್ಥೆಯನ್ವಯ ಪರಿಹಾರ ಭತ್ಯೆಯೊಂದಿಗೆ, ಈ ಕೆಳಕಂಡ ಮಾಸಿಕ ಮೂಲ ವೇತನವನ್ನು ಪ್ರತಿಯೊಬ್ಬ ಅಧಿಕಾರಿ / ನೌಕರರು ಪಡೆಯುತ್ತಿದ್ದಾರೆ.

| ಕ್ರ. ಸಂ. | ಹುದ್ದೆಯ ಹೆಸರು | ಅಧಿಕಾರಿ / ನೌಕರರ ಹೆಸರು ಶ್ರೀ / ಶ್ರೀಮತಿ | ಮೂಲ ವೇತನ ರೂ.ಗಳಲ್ಲಿ |
|---|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ | ಕಪಿಲ್ ಮೋಹನ್ | 77,440/– |

| ಕ್ರ ಸಂ. | ಹುದ್ದೆಯ ಹೆಸರು | ಅಧಿಕಾರಿ / ನೌಕರರ ಹೆಸರು<br>ಶ್ರೀ / ಶ್ರೀಮತಿ | ಮೂಲ ವೇತನ ರೂ.ಗಳಲ್ಲಿ |
|---|---|---|---|
| 2 | ಸರ್ಕಾರದ ಉಪ ಕಾರ್ಯದರ್ಶಿ | ಜಗನ್ನಾಥ್ .ಎನ್. | 40,050/– |
| 3 | ರಾಜ್ಯ ಸಂಪರ್ಕಾಧಿಕಾರಿ (ಎನ್.ಎಸ್.ಎಸ್.ಕೋಶ) | ಡಾ॥ ಗಣನಾಥ ಶೆಟ್ಟಿ | 62,420/– |
| 4 | ಆಂತರಿಕ ಆರ್ಥಿಕ ಸಲಹೆಗಾರರು | ಜಿ.ಆರ್. ನಾಗರಾಜ್ | 39,000/– |
| 5 | ಸರ್ಕಾರದ ಅಧೀನ ಕಾರ್ಯದರ್ಶಿ | ಪ್ರಭುಶಂಕರ್.ಆರ್. | 34,500/– |
| 6 | ಪತ್ರಾಂಕಿತ ಆಪ್ತ ಸಹಾಯಕರು ಗ್ರೇಡ್–II | ಸುಲೋಚನಾ ಎಂ.ಎಸ್. | 32,400/– |
| 7 | ಪತ್ರಾಂಕಿತ ಆಪ್ತ ಸಹಾಯಕಿ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಶಾರದಾ ಎನ್ ಮನೋಚಾರ್ಯ | 26,700/– |
| 8 | ಪತ್ರಾಂಕಿತ ಆಪ್ತ ಸಹಾಯಕಿ (ಆಂ.ಆ.ಸ.ಶಾಖೆ) | ಉಮಾ .ಆರ್. | 26,000/– |
| 9 | ಪೀಠಾಧಿಕಾರಿ (ಯುವ ಸಬಲೀಕರಣ ಶಾಖೆ) | ಹನುಮಂತರಾಯಪ್ಪ .ಜಿ. | 31,200/– |
| 10 | ಶಾಖಾಧಿಕಾರಿ (ಆಯವ್ಯಯ) | ಉಷಾ .ಎಸ್. | 30,400/– |
| 11 | ಶಾಖಾಧಿಕಾರಿ (ಅಭಿಪ್ರಾಯ) | ಹರ್ಷರಾಣಿ ಹೆಚ್.ಸಿ. | 35,400/– |
| 12 | ಶಾಖಾಧಿಕಾರಿ (ಸ್ವೀಮರ) | ವಿಜಯ .ಜಿ. | 30,400/– |
| 13 | ಶಾಖಾಧಿಕಾರಿ (ಪ್ರಧಾನ ಕಾರ್ಯದರ್ಶಿಯವರ ಆಪ್ತಶಾಖೆ) | ಗಾಯತ್ರಿ ದೇವಿ ಎನ್.ಎಸ್. | 25,300/– |
| 14 | ಹಿರಿಯ ಸಹಾಯಕರು (ಯುವಜನ ಸೇವೆ) | ಗಿರಿಜಾ ಪಾಟೀಲ್ | 20,000/– |
| 15 | ಹಿರಿಯ ಸಹಾಯಕಿ (ಸ್ವೀಮರ) | ಶಾಂತಿ .ಆರ್. | 21,000/– |
| 16 | ಹಿರಿಯ ಸಹಾಯಕಿ (ಅಭಿಪ್ರಾಯ) | ಲೀಲಾವತಿ | 20,000/– |
| 17 | ಹಿರಿಯ ಸಹಾಯಕಿ (ಆಯವ್ಯಯ) | ಲತಾ .ಆರ್. | 27,400/– |
| 18 | ಹಿರಿಯ ಸಹಾಯಕಿ (ಆಯವ್ಯಯ) | ಸಂಜ್ಯೋತ ಪ್ರಕಾಶ ಕರೋಶಿ | 21,000/– |
| | ಸಹಾಯಕಿ (ಎನ್.ಎಸ್.ಎಸ್.ಕೋಶ) | ಕುಸುಮಾದೇವಿ .ಎಂ.ಸಿ. | 24,600/– |
| 19 | ಸಹಾಯಕರು (ಅಭಿಪ್ರಾಯ) | ಖಾಲಿ | – |
| 20 | ಸಹಾಯಕಿ (ಸಮನ್ವಯ) | ಚಂದ್ರಕಲಾ .ಎಸ್. | 16,800/– |
| 21 | ಸಹಾಯಕಿ (ಸಮನ್ವಯ) | ರಾಜೇಶ್ವರಿ .ಎನ್. | 18,100/– |
| 22 | ಸಹಾಯಕಿ (ಯುವ ಸಬಲೀಕರಣ ಶಾಖೆ) | ನಾಗರತ್ನ .ಎಂ.ವಿ. | 16,400/– |
| 23 | ಸಹಾಯಕಿ (ಆಯವ್ಯಯ) | ಲೇಖಾ .ಬಿ.ಜಿ. | 17,200/– |
| 24 | ಸಹಾಯಕರು (ಅಭಿಪ್ರಾಯ) | ಖಾಲಿ | – |
| 25 | ಸಹಾಯಕರು (ಅಭಿಪ್ರಾಯ) | ಖಾಲಿ | – |
| 26 | ಸಹಾಯಕರು (ಎನ್.ಎಸ್.ಎಸ್.ಕೋಶ) | ಪಶುಪತಿ .ಎಂ. | 18,989/– |
| 27 | ಅಕೌಂಟೆಂಟ್ (ಎನ್.ಎಸ್.ಎಸ್.ಕೋಶ) | ಶೃಂಗೇಶ್ವರ್ .ಹೆಚ್.ಎಂ. | 26,199/– |
| 28 | ಶೀಘ್ರಲಿಪಿಗಾರರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಯೋಗೇಶ್ .ಎಂ.ವಿ. | 18,550/– |
| 29 | ಶೀಘ್ರಲಿಪಿಗಾರರು (ಅಧೀನ ಕಾರ್ಯದರ್ಶಿಯವರ ಆಪ್ತ ಶಾಖೆ) | ಖಾಲಿ | – |
| 30 | ಶೀಘ್ರಲಿಪಿಗಾರರು (ಎನ್.ಎಸ್.ಎಸ್.ಕೋಶ) | ಕೇಶವಮೂರ್ತಿ .ಎಸ್. | 18,906/– |

| ಕ್ರ ಸಂ. | ಹುದ್ದೆಯ ಹೆಸರು | ಅಧಿಕಾರಿ / ನೌಕರರ ಹೆಸರು ಶ್ರೀ / ಶ್ರೀಮತಿ | ಮೂಲ ವೇತನ ರೂ.ಗಳಲ್ಲಿ |
|---|---|---|---|
| 31 | ಕಿರಿಯ ಸಹಾಯಕರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಖಾಲಿ | – |
| 32 | ಕಿರಿಯ ಸಹಾಯಕರು (ಎನ್.ಎಸ್.ಎಸ್.ಕೋಶ) | ಖಾಲಿ | – |
| 33 | ಕಿರಿಯ ಸಹಾಯಕ (ಯುವ ಸಬಲೀಕರಣ ಶಾಖೆ) | ಮೋಹನ್‌ರಾಮ್ .ಆರ್.ಎಂ. | 19,500/– |
| 34 | ಕಿರಿಯ ಸಹಾಯಕ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ಉಪೇಂದ್ರ ಕುಮಾರ್.ಕೆ. | 15,250/– |
| 35 | ಕಿರಿಯ ಸಹಾಯಕರು (ಸ್ವೀಮರ) | ಖಾಲಿ | – |
| 36 | ಕಿರಿಯ ಸಹಾಯಕರು (ಆಯವ್ಯಯ) | ರಮೇಶ್ ರಾಜು ಟಿ.ವಿ. | 12,250/– |
| 36 | ಬೆರಳಚ್ಚುಗಾರ್ತಿ (ಸ್ವೀಮರ) | ಜಯಶ್ರೀ .ಎಂ. | 12,000/– |
| 37 | ಬೆರಳಚ್ಚುಗಾರ್ತಿ (ಆಯವ್ಯಯ) | ಶಿವಲೀಲಾ | 12,000/– |
| 38 | ವಾಹನ ಚಾಲಕರು (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಚಂದ್ರಶೇಖರ್ | 12,300/– |
| 39 | ವಾಹನ ಚಾಲಕರು (ಎನ್.ಎಸ್.ಎಸ್.ಕೋಶ) | ಲಕ್ಕಪ್ಪ | 10,000/– |
| 40 | ವಾಹನ ಚಾಲಕರು (ಸಾಮೂಹಿಕ ವಾಹನ) | ವೆಂಕಟೇಶ್ ಮೂರ್ತಿ | |
| 41 | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಮಂಚಮ್ಮ | 13,600/– |
| 42 | ದಲಾಯತ್ (ಪ್ರಧಾನ ಕಾರ್ಯದರ್ಶಿಯವರ ಆಪ್ತ ಶಾಖೆ) | ಕೆಂಪೇಗೌಡ | 11,800/– |
| 43 | ದಲಾಯತ್ (ಉಪ ಕಾರ್ಯದರ್ಶಿಯವರ ಆಪ್ತ ಶಾಖೆ) | ನಾರಾಯಣಶೆಟ್ಟಿ | 15,600/– |
| 44 | ದಲಾಯತ್ (ಸ್ವೀಮರ) | ವಿಜಯಮ್ಮ .ಎ.ಎಸ್. | 13,600/– |
| 45 | ದಲಾಯತ್ ( ಯುವ ಸಬಲೀಕರಣ ಶಾಖೆ) | ಖಾಲಿ | – |
| 46 | ದಲಾಯತ್ (ಅಭಿಪ್ರಾಯ) | ನಾಗರತ್ನಮ್ಮ | 13,600/– |
| 47 | ದಲಾಯತ್ (ಆಯವ್ಯಯ) | ಖಾಲಿ | |
| 48 | ದಲಾಯತ್ (ಎನ್.ಎಸ್.ಎಸ್.ಕೋಶ) | ದೇವರಾಜ್ .ಎನ್.ವಿ. | 20,000/– |
| 49 | ಡಾಟಾ ಎಂಟ್ರಿ ಆಪರೇಟರ್ (ಯುವ ಸಬಲೀಕರಣ ಶಾಖೆ) | ಸಂತೋಷ್ .ಕೆ. | 10,000/– |
| 50 | ಡಾಟಾ ಎಂಟ್ರಿ ಆಪರೇಟರ್ (ಸ್ವೀಮರ) | ಜಯರಾಮಯ್ಯ .ಎನ್. | 10,000/– |

**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ 2015–16ನೇ ಸಾಲಿನ ಆಯವ್ಯಯದ ವಿವರ**

**ABSTRACT OF DETAILED ESTIMATES OF EXPENDITURE UNDER 2204**

**SPORTS AND YOUTH EMPOWERMENT FOR 2015-16 (Rs. in lakhs)**

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 001 ನಿರ್ದೇಶನ ಮತ್ತು ಆಡಳಿತ<br>1 ಯುವಜನ ಸೇವೆ ಮತ್ತು ಕ್ರೀಡಾ ನಿರ್ದೇಶನಾಲಯ | Direction & Administration<br>Directorate of Youth Services & sports | | |
| 2204–00–001–1–01 ರಾಜ್ಯ ಮಟ್ಟ | State Level | | |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 002 ವೇತನ–ಅಧಿಕಾರಿಗಳು | Pay-Officer | -- | 35.00 |
| 003 ವೇತನ ಸಿಬ್ಬಂದಿ | Pay-Staff | -- | 108.00 |
| 011 ತುಟ್ಟಿ ಭತ್ಯೆ | Dearness Allowances | -- | 53.00 |
| 014 ಇತರೇ ಭತ್ಯೆ | Other Allowances | -- | 50.00 |
| 020 ವೈದ್ಯಕೀಯ ಭತ್ಯೆ | Medical Allowances | -- | 1.00 |
| 021 ವೈದ್ಯಕೀಯ ವೆಚ್ಚದ ಮರು ಪಾವತಿ | Medical Reimbursement Allowance | -- | 4.00 |
| 015 ಪೂರಕ ವೆಚ್ಚ (ದಿನಗೂಲಿ ನೌಕರರ ವೇತನ) | Supplementary Grant | | 26.04 |
| ವೇತನದ ಒಟ್ಟು | Salary Total | -- | 251.00<br>+26.04 |
| 041 ಪ್ರಯಾಣ ವೆಚ್ಚಗಳು | Travel Expenses | -- | 3.00 |
| 051 ಸಾಮಾನ್ಯ ವೆಚ್ಚಗಳು | General Expenditure | -- | 4.00 |
| 052 ದೂರವಾಣಿ ವೆಚ್ಚ | Telephone Charges | -- | 4.00 |
| 059 ಇತರೇ ಖರ್ಚು | Other Expenditure | | |
| ಎ. ಯುವಜನ ಶಿಬಿರ ಮತ್ತು ಮೇಳ | Youth Camps & Rallies | -- | 15.00 |
| ಬಿ. ತರಬೇತಿ ಕಾರ್ಯಕ್ರಮ ನಡೆಸುವಿಕೆ | Conduct of Trg. Programme | -- | 10.00 |
| ಸಿ. ಯುವಜನ ಸಾಹಿತ್ಯ ಪ್ರಕಟಣೆ | Publication of Youth Literature | -- | 30.00 |
| ಡಿ. ರಾಜ್ಯ ಯುವ ಪ್ರಶಸ್ತಿ | State Youth Award | -- | 5.00 |
| ಒಟ್ಟು 059 | | | 60.00 |
| 071 ಕಟ್ಟಡ ವೆಚ್ಚಗಳು | Building Expenses | -- | 16.00 |
| 195 ಸಾರಿಗೆ ವೆಚ್ಚಗಳು | Transport Expenses | -- | 20.00 |
| 001–1–01 ಒಟ್ಟು | 001-1-01 Total | | 358.00<br>+26.04<br>384.04 |
| 102 ವಿದ್ಯಾರ್ಥಿಗಳಿಗೆ ಯುವಜನ ಕಲ್ಯಾಣ ಕಾರ್ಯಕ್ರಮಗಳು<br>2 ಯುವಜನ ಸೇವಾ ಇಲಾಖೆ | Youth Welfare Programme for students<br>2 Dept. Of Youth Services. | | |
| 2204–00–102–2–03 ರಾಜ್ಯ/ರಾಷ್ಟ್ರ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಿದ ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ಉತ್ತೇಜಿತ ವಿದ್ಯಾರ್ಥಿ ವೇತನ | Incentive Scholarship to High School students for participating at State/National Level Sports Meet | | |
| 059 ಇತರೇ ಖರ್ಚು ಅ. ಯುವಜನೋತ್ಸವ | Other Exp. Youth Festival | 50.00 | -- |
| 117 ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ | Scholarships & Incentives | 115.00 | -- |
| 117 ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಉತ್ತಮ | Education Fee of all sports persons achieving | 76.00 | -- |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| ಸಾಧನೆ ಮಾಡುವ ಎಲ್ಲಾ ಕ್ರೀಡಾಪಟುಗಳ ಶೈಕ್ಷಣಿಕ ಶುಲ್ಕ ಮರುಪಾವತಿ | excellence at National and International Levels will be fully met by the State Government | | |
| 102–2–03 ಒಟ್ಟು | 102-2-03 Total | 241.00 | -- |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 103 ವಿದ್ಯಾರ್ಥಿಯೇತರರಿಗೆ ಯುವಜನ ಕಲ್ಯಾಣ ಕಾರ್ಯಕ್ರಮಗಳು | Youth Welfare Programme for Non Students. | | |
| 2204–00–103–0–02 059 ರಾಜ್ಯ ಯುವ ಕೇಂದ್ರ | State Youth Centre | 80.00 | 11.00 |
| 103–0–02 ಒಟ್ಟು | | 80.00 | 11.00 |
| 2204–00–103–0–18<br>059 ಇತರೇ ಖರ್ಚು<br>ಅ. ರಾಜ್ಯ ಯುವಜನ ಕೇಂದ್ರದಲ್ಲಿ ಒಳಾಂಗಣ ಚಟುವಟಿಕೆಗಳು<br>ಆ. ಜಿಲ್ಲಾ ಹಾಗೂ ರಾಜ್ಯಮಟ್ಟದ ಯುವಜನ ಸಮ್ಮೇಳನ ಮತ್ತು ಕಾರ್ಯಾಗಾರ<br>ಇ. ಜಿಲ್ಲಾ ಯುವ ಪ್ರಶಸ್ತಿ | 059 Other Expenditure<br>a. In house Youth Activities at State Youth Centre,<br>b. Dist. and State level Seminar and workshop<br>c. Dist. Youth Award | 20.00<br>70.00 | --<br>-- |
| 103–0–18 ಒಟ್ಟು | 103-0-18 Total | 90.00 | -- |
| 2204–00–103–0–27 ಯುವ ನೀತಿ ಅನುಷ್ಠಾನ<br>ಅ. 059 ಯುವ ಕಾರ್ಯಕ್ರಮ | a. Implementation of Youth Policy | 112.00 | -- |
| ಆ. 059 ನಮ್ಮೂರ ಶಾಲೆಗೆ ನಮ್ಮ ಯುವಜನರು | b. Nammura Shalege Namma Yuva Janaru | 176.00 | -- |
| ಇ. 059 ಯುವ ಶಕ್ತಿ ಕೇಂದ್ರ (ಹೊಸ ಯೋಜನೆ) | c. Yuva Shakthi Kendra (New Scheme) | 450.00 | -- |
| 103–0–27 ಒಟ್ಟು | 103-0-27 Total | 738.00 | |
| 2204–00–103–0–28 051 ಸಾಮಾನ್ಯ ವೆಚ್ಚ ರಾಜೀವ್ ಗಾಂಧಿ ಖೇಲ್ ಅಭಿಯಾನ್ | General Expenses, Rajiv Gandhi Khel Abhiyan | 10.00 | -- |
| 103–0–28 ಒಟ್ಟು | 103-0-28 Total | 10.00 | |
| 104 ಕ್ರೀಡಾ ಕಾರ್ಯಕ್ರಮ ಮತ್ತು ಪಂದ್ಯಗಳು | Sports and Games | | |
| 2204–00–104–0–02 015 ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ 015 (ನಗದು ಪ್ರಶಸ್ತಿ) ಪೂರಕ ವೆಚ್ಚಗಳು | Promotion of Sports Activities (Cash Award) Subsidiary Expenses | 300.00 | -- |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 059 ಇತರೇ ಖರ್ಚು | Other Exp | | |
| ಕರ್ನಾಟಕ ಸ್ಪೋರ್ಟ್ಸ್ ಅಕಾಡೆಮಿ ಫಾರ್ ಎಕ್ಸಲೆನ್ಸ್ | Karnataka Sports Academy for Excellence | 675.00 | -- |
| ಶಾಸಕರ ಕ್ರೀಡಾಕೂಟ | Legislature Sports. | -- | -- |
| **ಒಟ್ಟು** | **Total** | **975.00** | **--** |
| 100 ಧನ ಸಹಾಯ/ಪರಿಹಾರ (ರಾಜ್ಯ ಸರ್ಕಾರಿ ನೌಕರರಕ್ರೀಡಾಕೂಟ) | Financial Assistance/Relief (Govt. Employees Sports) | -- | 50.00 |
| 101 ಅನುದಾನ (ಕ್ರೀಡಾಪಟುಗಳು/ಅಖಿಲ ಭಾರತ ಗ್ರಾಮೀಣ, ಮಹಿಳಾ, ಸಿವಿಲ್ ಸರ್ವಿಸ್ ಕ್ರೀಡಾ ಕಾರ್ಯಕ್ರಮಕ್ಕೆ ಧನಸಹಾಯ) | GIA (Sports person/All India Rural, women and Civil Services Sports Programme) | -- | -- |
| 104–0–02 ಒಟ್ಟು | 104-0-02 Total | 975.00 | 50.00 |
| 2204–00–104–0–25 ಕ್ರೀಡಾ ಸಂಸ್ಥೆಗಳು ಮತ್ತು ನಿಲಯ | Sports Institutions & Hostels. | | |
| 002 ವೇತನ – ಅಧಿಕಾರಿಗಳು | Pay- Officers | -- | 18.00 |
| 003 ವೇತನ – ಸಿಬ್ಬಂದಿ | Pay-Staff | 17.00 | 34.00 |
| 011 ತುಟ್ಟಿ ಭತ್ಯೆ | Dearness Allowance | 6.00 | 18.00 |
| 014 ಇತರೇ ಭತ್ಯೆ | Other Allowances | 21.00 | 11.00 |
| 020 ವೈದ್ಯಕೀಯ ಭತ್ಯೆ | Medical Expenses | 1.00 | 1.00 |
| 021 ವೈದ್ಯಕೀಯ ಮರು ಪಾವತಿ | Medical Reimbursement | 3.00 | 3.00 |
| **ವೇತನ ಒಟ್ಟು** | **Salary Total** | **48.00** | **85.00** |
| **ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು** | **Name of the Scheme & Head of Account** | **ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan** | **Non-Plan** |
| 015 ಪೂರಕ ವೆಚ್ಚಗಳು | Subsidiary Expenses | -- | -- |
| 041 ಪ್ರಯಾಣ ವೆಚ್ಚಗಳು | Travelling Expenses | -- | -- |
| 051 ಸಾಮಾನ್ಯ ವೆಚ್ಚಗಳು, ಕ್ರೀಡಾ ಶಾಲೆ ಮತ್ತು ನಿಲಯಗಳು | General Expenses, Sports School & Hostels. | 1295.00 | -- |
| 059 ಇತರೇ ಖರ್ಚು | Other Expenditure | 180.00 | -- |
| ಅ. ವಿದ್ಯಾನಗರ ಆವರಣ ಅಭಿವೃದ್ದಿ | a. Devp. of Vidhyanagar Campus | | |
| ಆ. ಯುವಜನ ವಸತಿ ನಿಲಯ ಜೋಗ್ | b. Youth Hostel Jog | -- | 4.00 |
| 101 ಸಹಾಯಾನುದಾನ – (ಯುವಜನ ವಸತಿ ನಿಲಯ) | GIA (Youth Hostels) | 28.00 | -- |
| 104–0–25 ಒಟ್ಟು | 104-0-25 Total | 1551.00 | 89.00 |
| 2204–00–104–0–29 101 ಅ. ಕರ್ನಾಟಕ ಕ್ರೀಡಾ ಪ್ರಾದಿಕಾರ | Sports Authority of Karnataka | | |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 101 ಸಹಾಯಾನುದಾನ ವೇತನಗಳು | 101 GIA Salary | 223.00 | 319.00 |
| 103 ಸಹಾಯಾನುದಾನ ಸಾಮಾನ್ಯ ವೆಚ್ಚ | 103 GIA General Expenses | 262.00 | -- |
| ಆ. 101 ಯೂತ್ ಹಾಸ್ಟೆಲ್ ಅಸೋಸಿಯೇಷನ್ ಆಫ್ ಇಂಡಿಯಾ | 101 Youth Hostel Assn. Of India | -- | 1.00 |
| ಇ. 101 ಭಾರತ್ ಸೇವಾ ಸಮಾಜ್ | 101 Bharath Seva Samaj | -- | 5.00 |
| ಜಿ.ಐ.ಎ 101 & 103 ಒಟ್ಟು | GIA 101 & 103 Total | 485.00 | 325.00 |
| 059 ಇತರೇ ಖರ್ಚು | Other Expenditure | | |
| ಅ. ಕುಂಬಳಗೂಡು ತರಬೇತಿ ಕೇಂದ್ರ ಅಭಿವೃದ್ಧಿ | 1.Devpt. of Youth Trg. Campus Kumbalgood | 80.00 | -- |
| ಆ. ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಆಕಾಡೆಮಿ | 2.GETHNAA | 110.00 | 9.00 |
| 059 ಒಟ್ಟು | 059 Total | 190.00 | 9.00 |
| ಒಟ್ಟು 104–0–29 | 104-0-29 Total | 675.00 | 334.00 |
| 2204–00–104–0–32 059 ಗ್ರಾಮೀಣ ಕ್ರೀಡೆ ಮತ್ತು ಪಂದ್ಯಗಳು, 059 ಇತರೆ ವೆಚ್ಚ ಗ್ರಾಮೀಣ ಕ್ರೀಡೋತ್ಸವ (ಹೊಸ ಯೋಜನೆ) | Rural Sports and Games<br>059 Other Expenditure, Grammena Kreedothsava (New Scheme) | 264.00 | -- |
| ಹೊಸ ಗರಡಿ ಮನೆ ನಿರ್ಮಾಣಕ್ಕೆ | Construction of New Garadi Mane | 250.00 | |
| ಗರಡಿ ಮನೆ ಪುನಶ್ಚೇತನ/ದುರಸ್ತಿ | Garadi Mane Renovation | 220.00 | |
| ಒಟ್ಟು 104–0–32 | 104-0-32 Total | 734.00 | -- |
| 2204–00–104–0–33 059 ಯುವ ಸಂಜೀವಿನಿ | Yuva sanjevini. | 25.00 | -- |
| ಒಟ್ಟು 104–0–33 | 104-0-33 Total | 25.00 | |
| 800 ಇತರೆ ವೆಚ್ಚಗಳು | Other Expenditure | | |
| 2204–00–800–0–17 ಸಾಮಾನ್ಯ ವೆಚ್ಚಗಳು 051 ಪ್ರಚಾರ ಆಂದೋಲನ | General Expenses 051 Publicity Campaign | 25.00 | -- |
| ಒಟ್ಟು 800–0–17 | 800-0-17 Total | 25.00 | |
| 2204–00–800–0–18 015 ಪೂರಕ ವೆಚ್ಚಗಳು ಸೇವೆಯಲ್ಲಿರುವ ಇಲಾಖಾ ಅಧಿಕಾರಿಗಳು ಮತ್ತು ತರಬೇತುದಾರರಿಗೆ ತರಬೇತಿ ಕಾರ್ಯಕ್ರಮ | 015 Subsidiary Expenses<br>Training Programme for In-service Officers and Coaches | 3.00 | -- |
| **ಒಟ್ಟು 800–0–18** | **800-0-18 Total** | **3.00** | **--** |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 789 ಪರಿಶಿಷ್ಟ ಜಾತಿಯವರಿಗೆ ವಿಶೇಷ ಘಟಕ ಯೋಜನೆ | Special Component Plan for Scheduled Caste | | |

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | Name of the Scheme & Head of Account | ಆಯವ್ಯಯ ಅಂದಾಜು ಯೋಜನೆ /ಯೋಜನೇತರ Budget Estimate Plan | Non-Plan |
|---|---|---|---|
| 2204–00–789–0–01 422 ವಿಶೇಷ ಘಟಕ ಯೋಜನೆ | Special Component Plan -SCP | 1424.00 | -- |
| ಒಟ್ಟು 789–0–01 | 789-0-01 Total | 1424.00 | |
| 796 ಗಿರಿಜನ ಪ್ರದೇಶದ ಉಪಯೋಜನೆ | Tribal Area Sub-Plan | | |
| 2204–00–796–0–01 423 ಗಿರಿಜನ ಉಪಯೋಜನೆ | Tribal Area Sub Plan -TSP | 577.00 | -- |
| ಒಟ್ಟು 796–0–01 | 796-0-01 Total | 577.00 | |
| 4202–03–102–0–03 386 ಬಂಡವಾಳ ವೆಚ್ಚ<br>422 ಪರಿಶಿಷ್ಟ ಜಾತಿ ಉಪಯೋಜನೆ<br>423 ಗಿರಿಜನ ಉಪಯೋಜನೆ<br><br>4202–03–102–0–01 132<br>ರಾಜ್ಯ ಮಟ್ಟದ ಕ್ರೀಡಾಂಗಣಗಳ ನಿರ್ಮಾಣ | 386 Capital Expenditure<br>422 Schedule Caste Sub-plan<br>423 Tribal Sub-Plan<br><br>132 Construction of State level Stadiums<br>Capital Expenses | 1840.00<br>48.00<br>12.00<br>1900.00<br><br>100.00 | --<br><br><br>-- |
| | 4202 Total | 2000.00 | |
| ರಾಜ್ಯ ವಲಯ | State Total | 9148.00 | 842.00<br>+26.04<br>868.04 |

**PART-II**

**3053- CIVIL AVIATION**

| ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | ಆಯವ್ಯಯ ಅಂದಾಜು ಯೋಜನೆ Budget Estimate Plan | ಆಯವ್ಯಯ ಅಂದಾಜು ಯೋಜನೇತರ Budget Estimate Non-Plan |
|---|---|---|
| 3053–80–003–0–01 ಸರ್ಕಾರಿ ವೈಮಾನಿಕ ತರಬೇತಿ ಶಾಲೆ. | - | 7,02,98,000 |

4(1)(b)(xii) ಇಲಾಖೆಯಲ್ಲಿ ನೀಡುವ ಸಹಾಯಧನ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಈ ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳು ಇರುವುದಿಲ್ಲ.

**4(1)(b)(xiii) ಈ ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವ ವಿವರ:–**

ಈ ಇಲಾಖೆಯಲ್ಲಿ ಯಾವುದೇ ಪರವಾನಗಿ ಅಧಿಕಾರ ಪತ್ರ ಮತ್ತು ರಿಯಾಯಿತಿ ನೀಡಲಾಗುವುದಿಲ್ಲ.

**4(1)(b)(xiv) ಇಲಾಖೆಯಲ್ಲಿರುವ ಮಾಹಿತಿಯನ್ನು ವೆಬ್ ಸೈಟ್‌ನಲ್ಲಿ ಅಳವಡಿಸಿರುವ ಬಗ್ಗೆ ವಿವರ:–**

www.karunadu.gov.in ವೆಬ್‌ಸೈಟ್‌ನಲ್ಲಿ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಮಾಹಿತಿಯನ್ನು ನೋಡಬಹುದಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**4(1)(b)(xv) ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ, ಅದರ ವಿವರ:–**

ಸಾರ್ವಜನಿಕರು ಮಾಹಿತಿ ಪಡೆಯಲು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಈ ಕಛೇರಿಯನ್ನು ಸಂಪರ್ಕಿಸಬಹುದು. ಸಾರ್ವಜನಿಕರಿಗೆ ಯಾವುದೇ ಗ್ರಂಥಾಲಯ ಮತ್ತು ಓದುವ ಕೋಣೆಯನ್ನು ವ್ಯವಸ್ಥೆಗೊಳಿಸಿಲ್ಲ.

**4(1)(b)(xvi) ಇಲಾಖೆಯ ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು, ಪದನಾಮ ಮತ್ತು ಇತರ ವಿವರಗಳು:–**

1. ಸಾರ್ವಜನಿಕ ಪ್ರಾಧಿಕಾರ – ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಕೊಠಡಿ ಸಂಖ್ಯೆ: 243, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.
2. ಮೇಲ್ಮನವಿ ಪ್ರಾಧಿಕಾರ – ಸರ್ಕಾರದ ಉಪ ಕಾರ್ಯದರ್ಶಿ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಕೊಠಡಿ ಸಂಖ್ಯೆ: 241, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.
3. ಸಾರ್ವಜನಿಕ ಮಾಹಿತಿ ಅಧಿಕಾರಿ – ಸರ್ಕಾರದ ಅಧೀನ ಕಾರ್ಯದರ್ಶಿಗಳು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಕೊಠಡಿ ಸಂಖ್ಯೆ: 236, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.
4. ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ –
   ಅ) ಪೀಠಾಧಿಕಾರಿ, ಯುವ ಸಬಲೀಕರಣ ಶಾಖೆ, ಕೊಠಡಿ ಸಂಖ್ಯೆ: 237, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.
   ಆ) ಶಾಖಾಧಿಕಾರಿ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ (ಸಮನ್ವಯ) ಕೊಠಡಿ ಸಂಖ್ಯೆ: 238, 2ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು.

4(1)(b)(xvii)ಇತರೆ ವಿವರಗಳು; ಏನೂ ಇರುವುದಿಲ್ಲ.

**P.R. 338**
**SC-200**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಪ್ರಭುಶಂಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ,

## ಕಾನೂನು ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಲಾ 34 ಎಲ್ಎಎಂ 2016, ಬೆಂಗಳೂರು, ದಿನಾಂಕ: 28–03–2016.**

ದಿನಾಂಕ : 12–12–2014 ರಂದು ನಡೆದ ತಾಂತ್ರಿಕ ಸಲಹಾ ಸಮಿತಿ (TAP) ಸಭೆಯಲ್ಲಿ ಗೌರವಾನ್ವಿತ ನ್ಯಾಯಾಧೀಶರಾದ ಶ್ರೀ ರಾಮ್ ಮೋಹನ್ ರೆಡ್ಡಿ ಇವರು ಉಚ್ಚ ನ್ಯಾಯಾಲಯದ ಹಾಗೂ ಅಧೀನ ನ್ಯಾಯಾಲಯಗಳಿಂದ ಇ–ಮೇಲ್ (e-Mail) ಮೂಲಕ ಬರುವ ಸಮನ್ಸ್ ಮತ್ತು ನೋಟೀಸ್ ಮುಂತಾದವುಗಳನ್ನು ಸ್ವೀಕರಿಸಲು ಪ್ರತಿಯೊಂದು ಇಲಾಖೆಗೆ ಒಬ್ಬ ನೋಡಲ್ ಅಧಿಕಾರಿಯನ್ನು ನೇಮಿಸುವಂತೆ ಪ್ರಸ್ತಾಪಿಸಿರುವ ಹಿನ್ನೆಲೆಯಲ್ಲಿ, ಕಾನೂನು ಇಲಾಖೆಯ ಪರವಾಗಿ ಹಾಗೂ ಕಾನೂನು ಇಲಾಖೆಯನ್ನು ಪ್ರತಿವಾದಿಯನ್ನಾಗಿಸಿದ ನ್ಯಾಯಾಲಯಗಳ ಪ್ರಕರಣಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯಗಳಿಂದ ಇ–ಮೇಲ್ ಮುಖಾಂತರ ಕಳುಹಿಸಲಾಗುವ ನೋಟೀಸ್/ಸಮನ್ಸ್‌ಗಳನ್ನು ಕಾನೂನು ಇಲಾಖೆಯ ಸಂಬಂಧಿಸಿದ ಅಧಿಕಾರಿ/ನೌಕರರುಗಳಿಗೆ ತುರ್ತಾಗಿ ತಲುಪಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2), ಕಾನೂನು ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು–560001 (ಕಛೇರಿ ದೂರವಾಣಿ ಸಂಖ್ಯೆ : 22032423) ಇವರನ್ನು ಕಾನೂನು ಇಲಾಖೆಯ ನೋಡಲ್ ಅಧಿಕಾರಿಯನ್ನಾಗಿ ನೇಮಿಸಿದೆ.

**P.R. 339**
**SC-25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಉಮೇಶ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59